ಮಿಂಚಿನಬಳ್ಳಿಯ ೧೦ನೆಯ ವರ್ಷದ ನಾಲ್ಕನೆಯ ಕುಡಿ

# ಏಶಿಯಾ ಜನಾಂಗಗಳ ಪ್ರಾಚೀನ ನಾಗರಿಕತೆಗಳು

ಲೇಖಕರು :

ಶ್ರೀ. ಎಸ್. ಅನಂತಾಚಾರ್ ಬಿ. ಎ, [ಆನರ್ಸ್]

ಬೇಲೂರ

ಚಾಲುಕ್ಯ ವಿಕ್ರಮ ಶಕೆ: ೮೭೨

೧ನೆಯ ಅಗಷ್ಟ ೧೯೪೮

ಬೆಲೆ ೧—೪—೦

೧೧ನೆಯ ವರುಷದ ಮೊದಲನೆಯ ಕುಡಿ

# "ಧರ್ಮ ಹಾಗು ರಾಷ್ಟ್ರೀಯತ್ವ"

**ಲೇಖಕರು : ಶ್ರೀ. ಅರವಿಂದರು**

ರಾಷ್ಟ್ರದ ಪುನರುತ್ಥಾನದ ಈ ಕಾಲದಲ್ಲಿ ಭಾರತೀಯ ಸಂಸ್ಕೃತಿಯ ಭದ್ರವಾದ ತಳಹದಿಯ ಮೇಲೆ ರಾಷ್ಟ್ರ ನಿರ್ಮಾಣವನ್ನು ಹೇಗೆ ಮಾಡಬೇಕೆಂಬ ಬಗ್ಗೆ ಶ್ರೀ. ಯೋಗಿ-ವರ್ಯ ಅರವಿಂದರ ಸ್ಫೂರ್ತಿದಾಯಕ ವಿಚಾರಗಳನ್ನು ಇದರಲ್ಲಿ ಕಾಣಬಹುದು.

**ಇದೇ ವಿಜಯಾದಶಮಿಗೆ (ಅಕ್ಟೋಬರ) ಪ್ರಕಟವಾಗುವದು.**

ಹೊಸ ಚಂದಾದಾರರಾಗಲಿಚ್ಛಿಸುವವರು ಬೇಗನೆ ಚಂದಾದಾರರಾಗಬೇಕು.

ಪ್ರಕಾಶಕರು :
ಬಾಳಾಚಾರ್ಯ ಗುರಾಚಾರ್ಯ ಅವಧಾನಿ
ಪಿಂಚಿನಬಳ್ಳಿ, ಧಾರವಾಡ

ಮುದ್ರಕರು :
ಎನ್. ಎಸ್. ಬೆಂಗೇರಿ
ವಿಜಯ ಮುದ್ರಾಲಯ ಧಾರವಾಡ

# ವಾಚಕರಲ್ಲಿ

'ಏಶಿಯಾ ಜನಾಂಗಗಳ ಪ್ರಾಚೀನ ನಾಗರಿಕತೆ' ಎಂಬುದು ಈ ವರ್ಷದ ಕೊನೆಯ ಪುಸ್ತಕವು. ಇಲ್ಲಿಗೆ ಬಳ್ಳಿಗೆ ಹತ್ತು ವರ್ಷಗಳು ಮುಗಿದವು. ವಿಜಯದಶಮಿಯಿಂದ ೧೧ನೆಯ ವರ್ಷವು ಪ್ರಾರಂಭವಾಗುವದು. ಬಳ್ಳಿಯ ಚಂದಾದಾರರು ಹೊಸ ವರುಷದ ಚಂದಾ ೫—೮—೦ ಮನಿಯಾರ್ಡರಿನಿಂದ ಕಳಿಸಲು ಅಪೇಕ್ಷೆಯಿದ್ದಲ್ಲಿ ಸಪ್ಟಂಬರ ತಿಂಗಳ ಕೊನೆಯೊಳಗಾಗಿ ಕಳಿಸಬೇಕು. ಇಲ್ಲವಾದರೆ ವಾಡಿಕೆಯಂತೆ ವಿ. ಪಿ. ಕಳಿಸಲಾಗುವದು.

ಈ ಪುಸ್ತಕದ ವಿಷಯವು ಈಗಾಗಲೇ ಜನಗಳಲ್ಲಿ ಜನಜನಿತವಾಗಿದ್ದರೂ ಪುಸ್ತಕ ರೂಪದಿಂದ ಕನ್ನಡದಲ್ಲಿ ಈ ವರೆಗೂ ಪ್ರಕಟವಾಗಿಲಿಲ್ಲ. ಈ ಪುಸ್ತಕದಲ್ಲಿ ವರ್ಣಿತವಾದ ಏಶಿಯಾಖಂಡದ ಪ್ರಾಚೀನ ನಾಗರಿಕತೆಯು ಹೇಗೆ ಬೆಳೆದುಬಂದು ಇಂದಿನ ಮಟ್ಟಕ್ಕೆ ಜನಾಂಗವು ಹೇಗೆ ಮುಟ್ಟಿದೆ ಎಂಬುದನ್ನೂ ಮತ್ತು ಜಗತ್ತಿನ ನಾಗರಿಕತೆಗೆ ಈ ನಾಗರಿಕತೆಯು ಹೇಗೆ ಮೂಲಭೂತವಾಗಿರುವದೆಂಬದನ್ನೂ ತೋರಿಸುವದು. ಜಗತ್ತಿನಲ್ಲಿ ಪ್ರಾಚೀನ ಕಾಲದಲ್ಲಿ ರಾಜ್ಯ ಸಾಮ್ರಾಜ್ಯಗಳನ್ನು ಕಟ್ಟಿ, ಬಾಳಿ ಬೆಳಗಿದ ಎಲ್ಲ ಜನಾಂಗಗಳ ನಾಗರಿಕತೆಯಲ್ಲಿ ಒಂದು ಬಗೆಯ ಸಾಮ್ಯವು ನಮಗೆ ಕಂಡು ಬರುವದು. ವೈಷಮ್ಯಗಳು ದೇಶ-ಕಾಲಗಳ ಪರಿಸ್ಥಿತಿಯ ಮೂಲಕವೇ ಉಂಟಾದುದೆಂಬುದೂ ಒಡೆದು ಕಾಣುವದು. ಈ ಎಲ್ಲ ಜನಾಂಗಗಳ ಮೂಲ ಪುರುಷರು ಒಂದೇ ಜನಾಂಗದವರು ಇರಬಹುದೇ ? ಎಂಬ ಸಂಶಯವು ಕಂಡು ಬರುವ ಸಾಮ್ಯಗಳಿಂದ ತಲೆ ಎತ್ತುವದು.

ಈ ವಿಷಯದಲ್ಲಿ ಪೌರ್ವಾತ್ಯ ಲೇಖಕರಲ್ಲಿ ಇನ್ನೂ ಭಿನ್ನಾಭಿಪ್ರಾಯವಿದೆ ಭಾರತೀಯರು ಅಥವಾ ಆರ್ಯರು ಮಧ್ಯ ಏಶಿಯಾದಿಂದ ಇಲ್ಲಿ ಬಂದವರೋ ಅಥವಾ ಈ ಆರ್ಯಸಂತತಿಯು ಭಾರತದಿಂದಲೇ ಕಡೆಗೆ ಹರಡಿತೋ ಎಂಬುದು ಇನ್ನೂ ವಿವಾದಾಸ್ಪದವಾಗಿದೆ. ನಮ್ಮ ಪ್ರಾಚೀನ ಪರಂಪರೆಯಲ್ಲಿ 'ಭರತಖಂಡೇ' ಎಂದು ಉಚ್ಚರಿಸುವ ಭರತಖಂಡದ ವ್ಯಾಪ್ತಿಯು ಇನ್ನೂ ನಿರ್ಣೀತವಾಗಿಲ್ಲ. ಭಾರತ, ಭಾಗವತಾದಿಗಳಲ್ಲಿ ವರ್ಣಿಸಲ್ಪಡುವ ಭರತಖಂಡದ ಭವ್ಯ ವರ್ಣನೆಯನ್ನು ನೋಡಿದರೆ ಭರತಖಂಡವು ಏಶಿಯಾಖಂಡವನ್ನೇಯೇಕೆ ಅದಕ್ಕಿಂತಲೂ ಹೆಚ್ಚು ವಿಸ್ತೃತವಿರಬಹುದೇ ಎಂಬ ಪ್ರಶ್ನೆಯು ಉದ್ಭೂತವಾಗುತ್ತಿದೆ. ಹೀಗಿದ್ದಲ್ಲಿ 'ಭಾರತೀಯರಾದ ಆರ್ಯರು ತಮ್ಮ ಸಂಸ್ಕೃತಿಯನ್ನು ಭರತಖಂಡದಲ್ಲೆಲ್ಲ

ಹರಡಿದ್ದರು.' ಆದುದರಿಂದಲೇ ಏಶಿಯಾ ಜನಾಂಗಗಳ ನಾಗರಿಕತೆಯಲ್ಲಿ ಮೂಲಭೂತವಾದ ಮಾತುಗಳು ಒಂದೇ ಬಗೆಯಾಗಿ ಕಾಣುವವೆಂದು ಊಹಿಸುವವರ ಊಹೆಯನ್ನು ಅಲ್ಲಗಳೆಯುವದೂ ಕಷ್ಟ. ಈ ದೃಷ್ಟಿಯಿಂದ ಭಾರತೀಯ ಇತಿಹಾಸಕಾರರು ನಮ್ಮ ವೇದ ಪುರಾಣಗಳಲ್ಲಿ ಅಡಗಿರುವ ಸಂಸ್ಕೃತಿಯನ್ನು ಅಭ್ಯಸಿಸಿ, ಜನತೆಯ ಮುಂದಿಡುವದು ಅವಶ್ಯವೆಂದು ನಮಗನಿಸುತ್ತದೆ.

ಈ ಪುಸ್ತಕದಲ್ಲಿ ವರ್ಣಿಸಲ್ಪಟ್ಟ ಸಂಗತಿಗಳು ಹೆಚ್ಚಾಗಿ ಪಾಶ್ಚಾತ್ಯ ದೃಷ್ಟಿಯಿಂದ ಅಭ್ಯಸಿಸಿದ ವಿದ್ವಾಂಸರ ಬರಹಗಳ ಆಧಾರದಿಂದ ಬರೆಯಲ್ಪಟ್ಟಿವೆ. ನಮ್ಮ ವಿದ್ವಾಂಸರಲ್ಲಿ ಭಾರತೀಯ ದೃಷ್ಟಿಯು ಇನ್ನೂ ಒಡಮೂಡಬೇಕಾಗಿದೆ. ಆ ದೃಷ್ಟಿಯು ಜಗತ್ತಿಗೆ ಹೊಸ ಬೆಳಕನ್ನು ಕೊಡಲೂ ಬಹುದು.

ಶ್ರೀಮಾನ್ ಬೇಲೂರ ಅನಂತಾಚಾರ್ಯರು ಪರಿಶ್ರಮಪೂರ್ವಕವಾಗಿ ನಾಗರಿಕತೆಯ ಅಭ್ಯಾಸವನ್ನು ಮಾಡಿ ಕನ್ನಡ ಜನಾಂಗಕ್ಕೆ ಈ ಕಿರಿಹೊತ್ತಿಗೆಯನ್ನು ಒದಗಿಸಿಕೊಟ್ಟದ್ದಕ್ಕಾಗಿ ನಾವು ತುಂಬ ಆಭಾರಿಯಾಗಿದ್ದೇವೆ. ಲೇಖಕರು ಹೊಸಬರು. ಶೈಲಿಯಲ್ಲಿ ಸ್ವಲ್ಪ ಶಿಥಿಲತೆ ಕಂಡರೂ ವಿಷಯ ಸಂಗ್ರಹದ ದೃಷ್ಟಿಯ ಕಡೆಗೆ ಗಮನಿಸಬೇಕಾಗಿ ವಾಚಕರಲ್ಲಿ ನಮ್ಮ ಬಿನ್ನಹ. ಜನಾಂಗವು ಚೇತರಿಸಿಕೊಂಡು ಏಳುತ್ತಿರುವ ಈ ಸಮಯದಲ್ಲಿ ಈ ಪುಸ್ತಕವು ಕನ್ನಡ ಜನಾಂಗಕ್ಕೆ ಒಳ್ಳೇ ಉಪಯುಕ್ತವಾಗುವದೆಂದು ಆಶಿಸುತ್ತೇನೆ.

ಬಳ್ಳಿಯು ಈ ಹತ್ತು ವರ್ಷ ಸೇವೆಗೈದಿದೆ. ಅದರಲ್ಲಿ ಕುಂದುಕೊರತೆಗಳಿಲ್ಲವೆಂದಲ್ಲ. ಈ ಪ್ರಯತ್ನದಲ್ಲಿ ವಾಚಕರೆಲ್ಲರೂ ನೆರವಾಗಬೇಕೆಂದು ನನ್ನ ಬಯಕೆ. ಈ ಮಾಲೆಯಲ್ಲಿ ಯಾವ ಬಗೆಯ ಸುಧಾರಣೆಗಳನ್ನು ಮಾಡಬೇಕೆಂಬುದನ್ನು ಸೂಜ್ಞರಾದ ವಾಚಕರು ಸೂಚಿಸಬೇಕೆಂದು ಬಿನ್ನವಿಸುತ್ತೇನೆ. ಕನ್ನಡಿಗರೆಲ್ಲರೂ ಎಂದಿನಂತೆ ರಾಷ್ಟ್ರೀಯ ಪುನರುಜ್ಜೀವನದ ಈ ಕಾರ್ಯದಲ್ಲಿ ಸಕ್ರಿಯವಾಗಿ ಸಹಾಯ ನೀಡುವಿರೆಂದು ನಂಬಿರುವ,

ತಮ್ಮ
**ಬಯಲ್ ಬಿಂದುಮಾಧವ**

# ಪೀಠಿಕೆ

ಇಂದಿನ ಪರಿಸ್ಥಿತಿಯಲ್ಲಿ ನಾವು ಐತಿಹಾಸಿಕ ದೃಷ್ಟಿಯಿಂದ ಬಹಳ ಮುಂದುವರಿದಿದ್ದೇವೆ. ಪ್ರಪಂಚದ ಜನಾಂಗಗಳ ಇತಿಹಾಸಗಳು ಬಹಳ ಮಟ್ಟಿಗೆ ಎಲ್ಲ ಭಾಷೆಗಳಲ್ಲಿಯೂ ಬರೆಯಲ್ಪಟ್ಟಿವೆ ಎಲ್ಲ ಅಂತಸ್ತಿನ ವರಿಗೂ ತಿಳಿಯುವಂತೆ ಇಂಗ್ಲೀಷ ಹಾಗು ಎಲ್ಲ ಪ್ರಾಂತೀಯ ಭಾಷೆಗಳಲ್ಲಿಯೂ ಬರೆಯಲ್ಪಟ್ಟಿವೆ.

ಇತಿಹಾಸದ ವಿವಿಧಾಂಗಗಳ ಮೇಲೆಯೂ ನುರಿತ ವಿದ್ವಾಂಸರು ಅನೇಕ ಗ್ರಂಥಗಳನ್ನು ಬರೆದಿರುತ್ತಾರೆ. ಕಾಲನಿರ್ಣಯ, ಒಂದು ಕಾಲಕ್ಕೆ ಸಂಬಂಧಪಟ್ಟ ಸಾಣ್ಯಗಳನ್ನು ಗೊತ್ತುಮಾಡುವದು, ಶಿಲ್ಪಕಲೆ, ಆಡಳಿತದ ಪದ್ಧತಿ, ಸಾಮಾಜಿಕಶಾಸ್ತ್ರ ಇವೇ ಮೊದಲಾದ ಅಂಶಗಳ ಮೇಲೆ ಪ್ರತ್ ಪ್ರತ್ಯೇಕವಾಗಿ ಇತಿಹಾಸಗಳು ಬರೆಯಲ್ಪಟ್ಟಿವೆ. ಡಾ. ಎ. ವೆಂಕಟ ಸುಬ್ಬಯ್ಯ, ಶ್ರೀ ಪ್ರಸನ್ನ ಕುಮಾರ ಭಟ್ಟಾಚಾರ್ಯ, ಡಾ. ಆರ್. ಶಾಮಾ ಶಾಸ್ತ್ರಿಗಳು, ಜದುನಾಥ ಸರ್ಕಾರ್ ಮೊದಲಾದ ಭಾರತೀಯ ಇತಿಹಾಸಜ್ಞರು ಭಾರತದ ಹಿರಿಮೆಯನ್ನು ಹೊರಗೆಡಹಿದ್ದಾರೆ. ಲೋಕಮಾನ್ಯ ಟಿಳಕರು ವೇದಗಳ ಮೇಲಿಂದ ಆರ್ಯರ ಮೂಲ ಸ್ಥಾನವನ್ನು ಗೊತ್ತು ಮಾಡಲು ಯತ್ನಿಸಿದ್ದಾರೆ. ಮ್ಯಾಕ್ಸಮುಲ್ಲರ ಡಾ. ವಿಂಟರನಿಟ್ಜ ಮೊದಲಾದ ಪಾಶ್ಚಾತ್ಯ ವಿದ್ವಾಂಸರು ಕೂಡ ಭಾರತೀಯ ಇತಿಹಾಸವನ್ನು ವ್ಯಾಸಂಗ ಮಾಡಿ ವಿಶ್ವಸಾಹಿತ್ಯಕ್ಕೆ ಸಹಾಯ ಮಾಡಿದ್ದಾರೆ. ಈ ಎಲ್ಲ ಮಹನೀಯರು ಪಟ್ಟ ಶ್ರಮದ ಫಲವಾಗಿ ಇಂದಿಗೆ ಇತಿಹಾಸದಲ್ಲಿ ಅಮೌಲ್ಯವಾದ ವಸ್ತು ವಿದೆ. ಇದೆಲ್ಲವನ್ನು ಅಭ್ಯಸಿಸಲು ಒಂದು ಜೀವಮಾನವೂ ಕೂಡ ಸಾಲದು.

ವಿಶ್ವದ ನಾಗರಿಕತೆಗಳ ಸಾರಸರ್ವಸ್ವವನ್ನು ತಿಳಿಯಲು ಜಗತ್ತಿನ ಎಲ್ಲ ದೇಶಗಳ ಚರಿತ್ರೆಗಳನ್ನು ಓದಿ, ನಾಗರಿಕತೆಯ ಬೆಳವಣಿಗೆಯಲ್ಲಿ ಆಯಾದೇಶಗಳು ವಹಿಸಿರುವ ಪಾತ್ರವನ್ನು ನಿರ್ಧರಿಸಲು ಈ ಇತಿಹಾಸವೇ ಆಧಾರವಲ್ಲವೇ? ಈ ದೃಷ್ಟಿಯಿಂದ ಇವೆಲ್ಲವುಗಳ ಅಭ್ಯಾಸ ಅವಶ್ಯ.

ಈ ದಿಸೆಯಲ್ಲಿ ಸುಪ್ರಸಿದ್ಧ ಇತಿಹಾಸ ವಿದ್ವಾಂಸರುಗಳಾದ ಎಚ್. ಜಿ. ವೆಲ್ಸ್, ಥಾರ್ನ್‌ಡೈಕ, ಸರ್, ಲಿಯೋನಾಲ್ಡ ವುಲಿ, ಸರ್ ಈ. ಎ. ವಾಲಿಸ್ ಬಡ್ಜ, ಸರ್, ಲಿಯೋನಾರ್ಡ ಸ್ಕಿಟ್ರಟ್ಸ, ಚೈಲ್ಡ ಮುಂತಾದವರು

ನಾಗರಿಕತೆಯ ಚರಿತ್ರೆಯನ್ನೇ ಪ್ರಾಮುಖ್ಯವಾಗಿ ಹಾಗು ಪ್ರತ್ಯೇಕವಾಗಿ ಬರೆದಿರುತ್ತಾರೆ. ಇವುಗಳ ಅಭ್ಯಾಸವು ವಿಶ್ವದ ವಿವಿಧ ನಾಗರಿಕತೆಗಳ ಜ್ಞಾನವನ್ನು ನಮಗೆ ಮಾಡಿಕೊಡುವದು. ಆದರೇನು? ಇವೆಲ್ಲವು ಇಂಗ್ಲೀಷ ಭಾಷೆಯಲ್ಲಿವೆ. ನಮ್ಮ ದೇಶದ ವಿದ್ವಾಂಸರು ಕೂಡ ಈ ವಿಷಯದ ಮೇಲೆ ಇಂಗ್ಲಿಷಿನಲ್ಲಿಯೇ ಬರೆದಿರುತ್ತಾರೆ. ಇತಿಹಾಸಜ್ಞರಾದ ಶ್ರೀಮಾನ್ ಎಸ್. ವಿ. ವೆಂಕಟೇಶ್ವರರವರು Indian culture through the Ages 'ಇಂಡಿಯನ್ ಕಲ್ಚರ್ ಥ್ರು ದಿ ಏಜಿಸ್' ಎಂಬ ಹೆಸರಿನಲ್ಲಿ ಕೆಲವು ಪುಸ್ತಕಗಳನ್ನೂ, ಅರ್ಥಶಾಸ್ತ್ರಜ್ಞರಾದ ಕೆ. ಟಿ. ಶಹಾರವರು 'ದಿ ಸ್ಪ್ಲೆಂಡರ್ ದೆಟ್ ವಾಜ ಇಂಡ್' The Splendour that was Ind ಎಂಬ ಗ್ರಂಥವನ್ನು ಪ್ರಕಟಿಸಿ ಭಾರತದ ಕೀರ್ತಿಯನ್ನು ಬೆಳಗಿದ್ದಾರೆ. ಈ. ಬಿ. ಹ್ಯಾವೆಲ್, ಡಾ ಆನಂದಕುಮಾರ ಸ್ವಾಮಿ ಮೊದಲಾದವರು ಭಾರತೀಯ ಕಲೆಯ ವೈಶಿಷ್ಟ್ಯವನ್ನು ವಿಶ್ವವ್ಯಾಪಕವಾಗಿ ಮಾಡಿದ್ದಾರೆ. ಪಂಡಿತ ಜವಾಹರಲಾಲ ನೆಹರುರವರು 'ಡಿಸ್ಕವ್ಹರಿ ಆಫ್ ಇಂಡಿಯಾ' ಎಂಬ ಗ್ರಂಥವನ್ನು ಬರೆದು ಭಾರತದ ಸಂಸ್ಕೃತಿಯ ಹಿರಿಮೆಯನ್ನು ಜಗತ್ತಿಗೆ ಸ್ಪಷ್ಟಪಡಿಸಿದ್ದಾರೆ. ಮಾನವನ ಜೀವನದ ವಿವಿಧಾಂಗಗಳನು ವಿಚಾರಿಸುವಾಗ ನಮ್ಮ ದೇಶದ ನಾಗರಿಕತೆಯಲ್ಲಿ ಅವುಗಳು ಅತಿ ಪ್ರಾಚೀನ ಕಾಲದಲ್ಲಿಯೇ ಪಡೆದಿದ್ದ ಸ್ಥಾನವನ್ನು ನಿರ್ಧರಿಸಿ ನಮ್ಮ ದೇಶದ ಚರಿತ್ರೆಯನ್ನು ಪುಷ್ಟಿಗೊಳಿಸಿದ್ದಾರೆ ಹೀಗೆ ವಿಶ್ವದ ಇತಿಹಾಸ, ಸಂಸ್ಕೃತಿ, ನಾಗರಿಕತೆ ಇವುಗಳ ಮೇಲೆ ಅನೇಕ ಗ್ರಂಥಗಳು ಬರೆಯಲ್ಪಟ್ಟಾಗೂ ಅವೆಲ್ಲವುಗಳು ಮೇಲೆ ಹೇಳಿದಂತೆ ಆಂಗ್ಲ ಭಾಷೆಯಲ್ಲಿಯೇ ಇವೆ. ಕನ್ನಡ ಭಾಷೆಯಲ್ಲಿ ಇಂಥ ಗ್ರಂಥಗಳ ಕೊರತೆ ಬಹಳವಾಗಿದೆ.

ಕನ್ನಡ ಭಾಷೆಯಲ್ಲಿ ಕರ್ನಾಟಕದ ಸಂಸ್ಕೃತಿ, ಕನ್ನಡ ಕವಿಗಳ ಜೀವಮಾನ, ಕನ್ನಡ ಸಾಹಿತ್ಯದ ಬೆಳೆವಣಿಗೆ ಇವೇ ಮೊದಲಾದ ಗಹನ ಸಾಂಸ್ಕೃತಿಕ ವಿಷಯಗಳ ಮೇಲೆ ಆಧಾರಭೂತವಾದ ಪುಸ್ತಕಗಳು ಇವೆ. ಆದರೆ ನಾಗರಿಕತೆಯ ವಿಷಯದಲ್ಲಿ ಅಂಥ ಗ್ರಂಥಗಳು ಇನ್ನೂವರೆಗೂ ಬರೆಯಲ್ಪಟ್ಟಿಲ್ಲ. ಇಂತಹ ಕೊರತೆಯನ್ನು ತುಂಬುವದು ಕನ್ನಡ ಜನಾಂಗದ ದೃಷ್ಟಿಯಿಂದ ಅತ್ಯಂತ ಅವಶ್ಯ.

ಇಂತಹ ಪ್ರಯತ್ನಕ್ಕೆ ಕೈಹಾಕುವದು ಸ್ವಲ್ಪ ಕಷ್ಟ. ಏಕೆಂದರೆ, ವಿಶ್ವದ ಸಾಹಿತ್ಯವು ಅವ್ಯಾಹತವಾಗಿ ವೃದ್ಧಿಗೊಳ್ಳುತ್ತಲಿದೆ. ಅದರ ಸ್ವರೂಪ ಗಳು ಬದಲಾಗುತ್ತಿವೆ, ಸಂಶೋಧನೆಗಳು ನಡೆಯುತ್ತಲಿವೆ. ದೇಶ-ಕಾಲಗಳ ನಿರ್ಣಯ ಮಾಡುವದರಲ್ಲಿ ವಿದ್ವಾಂಸರಲ್ಲಿಯೇ ಅನೇಕ ಮತಭೇದಗಳು ಕಂಡು ಬರುತ್ತಲಿವೆ. ಇಂತಹ ಸಮಯದಲ್ಲಿ ಒಳ್ಳೇ ಹೊಣೆಗಾರಿಕೆಯಿಂದ ಅಭ್ಯಾಸ ಪೂರ್ವಕವಾಗಿ ನಾವು ಈ ದಿಸೆಯಲ್ಲಿ ಮುಂದುವರಿಯಬೇಕಾಗಿದೆ. ನಮ್ಮಿಂದ ತಪ್ಪು ತಡೆಗಳಾದರೂ ಜ್ಞಾನಲಾಲಸೆಯಿಂದ ಈ ಬಗೆಯ ಪ್ರಯತ್ನಕ್ಕೆ ಕೈಯಿಕ್ಕಬೇಕು. ಜನಾಂಗಕ್ಕೆ ಜ್ಞಾನವನ್ನು ಒದಗಿಸಿಕೊಡಲೇ ಬೇಕು.

ಈ ಸಣ್ಣ ಪುಸ್ತಕದಲ್ಲಿ ಏಶಿಯಾಖಂಡದ ವಿವಿಧ ಜನಾಂಗಗಳ ನಾಗರಿಕತೆಯ ಬೆಳವಣಿಗೆಯನ್ನು ಅಥವಾ ಅದರ ಸ್ವರೂಪವನ್ನು ವಿವರಿಸಲು ಯತ್ನಿಸಲಾಗಿದೆ. ಇದೇ ಇದರ ಮುಖ್ಯವಾದ ವಸ್ತು. ಇಂದು ನಗರ ಗರ್ಭಗಳಲ್ಲಿ ಹುಟ್ಟಿ ನಾಗರಿಕನಾಗಿ ವಿಜ್ಞಾನ, ಕಲೆ, ಸಾಹಿತ್ಯ, ರಾಜಕೀಯ, ವ್ಯಾಪಾರ ಇವೇ ಮೊದಲಾದವುಗಳಲ್ಲಿ, ಮನುಷ್ಯನು ಅನೇಕ ಶತಮಾನಗಳ ಹಿಂದೆ ಯಾವ ಯಾವ ಸ್ಥಿತಿಯಲ್ಲಿದ್ದನು, ಎಂತಹ ಸನ್ನಿವೇಶದಲ್ಲಿ ಯಾವ ಯಾವ ಸಾಹಸೋದ್ಯಮಗಳನ್ನು ಕೈಕೊಂಡನು; ಮತ್ತು ನಾಗರಿಕತೆಯ ಶೈಶವಾವಸ್ಥೆಯನ್ನು ಹೇಗೆ ಮುಗಿಸಿಕೊಂಡು ಇಂದಿನ ಸ್ಥಿತಿಗೆ ಬಂದನು ಎಂಬ ವಿಷಯಗಳನ್ನು ಸಣ್ಣ ಸಣ್ಣ ಅಧ್ಯಾಯಗಳಲ್ಲಿ ವಿವರಿಸಲಾಗಿದೆ.

ಭಾರತೀಯರಾದ ನಮಗೆ ಮಾತ್ರವಲ್ಲದೆ ಪ್ರತಿಯೊಂದು ಜನಾಂಗಕ್ಕೂ ಈ ನಾಗರಿಕತೆಯ ಪರಿಚಯವಿರುವದು ಆವಶ್ಯಕ. ನಾಗರಿಕತೆಯ ಈ ಪರಿಚಯದಿಂದ ಜನಾಂಗಗಳ ವಿಷಯಗಳಲ್ಲಿ ಆದರ-ವಿಶ್ವಾಸಗಳು ಉಂಟಾಗುತ್ತವೆ. ಸಂಸ್ಕಾರ ಸಾಮರಸ್ಯದ ಇತಿಹಾಸವು ಜನಾಂಗಗಳಲ್ಲಿ ಸೌಹಾರ್ದವನ್ನುಂಟುಮಾಡುತ್ತದೆ. ಪ್ರಾಚೀನ ಕಾಲದಲ್ಲಿ ವೈಭವದಿಂದ ಮೆರೆದು ಸಕಲ ವಿಧದಲ್ಲೂ ಅಭಿವೃದ್ಧಿಯನ್ನು ಹೊಂದಿದ್ದ ಜನಾಂಗಗಳು ನಾಶ ಹೊಂದಿದ ಕಾರಣವನ್ನರಿತು, ನಮ್ಮ ಬಾಳನ್ನು ಯಾವ ಬಗೆಯಾಗಿ ನಿರ್ಮಿಸಬೇಕೆಂಬ ಅರಿವು ಉಂಟಾಗುತ್ತದೆ. ಪ್ರಾಚೀನ ಜನಾಂಗಗಳು

ಸಾಧಿಸಿದ ಮಹತ್ಕಾರ್ಯಗಳನ್ನು ಆಮೂಲಾಗ್ರವಾಗಿ ಪರೀಕ್ಷಿಸಿದಲ್ಲಿ ಅವುಗಳ ಪ್ರಭಾವವು ಇಂದಿನ ಜೀವನದ ಉತ್ಕೃಷ್ಟ ಭಾವನೆಗಳಿಗೆ ಮೂಲಾಧಾರವಾಗಿರುವವೆಂದೂ ಬಹಳ ದೂರವಾಗಿಲ್ಲವೆಂದೂ ಭಿನ್ನವಾಗಿಲ್ಲ ವೆಂದೂ ತಿಳಿದು ಬರುವದು. ಅವುಗಳ ಹಿನ್ನೆಲೆಯೇ ನಮ್ಮ ಭವ್ಯ ಭವಿತವ್ಯಕ್ಕೆ ಕಾರಣವಾಗಿದೆ.

ಇನ್ನು ಕೆಲವು ಅಧ್ಯಾಯಗಳಲ್ಲಿ ಏಶಿಯಾಖಂಡದ ಕೆಲವು ಜನಾಂಗ ಗಳ ಮತ್ತು ಇಜಿಪ್ತಿನ ಪುರಾತನ ನಾಗರಿಕತೆಯ ವಿಚಾರವಾಗಿ ಬೆಳಕಿಗೆ ಬಂದಿರತಕ್ಕ ಕೆಲವಂಶಗಳನ್ನು ವಿಶದಪಡಿಸಲಾಗಿದೆ ಈ ದೇಶಗಳ ನಾಗರಿ ಕತೆಗಳು ಬೆಳೆದ ರೀತಿಯು ಎಲ್ಲ ದೇಶಗಳಿಗೂ ಅನ್ವಯಿಸುತ್ತದೆ. ಏಶಿಯಾ ಖಂಡದ ನಾಗರಿಕತೆಯೊಂದಿಗೆ ಇಜಿಪ್ತಿನ ನಾಗರಿಕತೆಯನ್ನು ಸಮಕಾಲೀನ ವಾದುದಾಗಿ ಭಾವಿಸಲಾಗಿದೆ. ಏಕೆಂದರೆ, ಅರೇಬಿಯಾ, ಇಜಿಪ್ತ ಮತ್ತು ಭಾರತ ಇವುಗಳಿಗೆ ಭೂಸಂಬಂಧವಿತ್ತೆಂದು ಭೂಗರ್ಭಶಾಸ್ತ್ರಜ್ಞರು ಮತ್ತು ಇತಿಹಾಸಕಾರರು, ಲಿಪಿಯ ಸಂಶೋಧಕರು ಅಭಿಪ್ರಾಯಪಡುತ್ತಾರೆ.

ಈ ಸಣ್ಣ ಪುಸ್ತಕವನ್ನು ಬರೆಯಲು ಕೆಲವು ಮಹನೀಯರುಗಳ ಪುಸ್ತಕಗಳನ್ನೂ ಲೇಖನಗಳನ್ನೂ ಅವಲೋಕಿಸಿದ್ದೇನೆ ಅವರಿಗೆ ನಾನು ತುಂಬ ಕೃತಜ್ಞನಾಗಿದ್ದೇನೆ ಈ ಪುಸ್ತಕವನ್ನು ತಿದ್ದುಪಡಿಮಾಡಿ ಬದ ಲಾವಣೆಗಳನ್ನು ಮಾಡಲು ಸೂಕ್ತಸಲಹೆಯನ್ನಿತ್ತ ಶ್ರೀ ಬಿ. ನರಸಿಂಹ ಯ್ಯಂಗಾರ್ಯರಿಗೂ ಮತ್ತು ಆರ್. ಸೂರಪ್ಪನವರಿಗೂ ತರೀಕೆರೆಯಲ್ಲಿರುವ ವಿದ್ವಾನ್ ನರಸಿಂಹ ಶಾಸ್ತ್ರಿಗಳವರಿಗೂ ನಾನು ತುಂಬ ಋಣಿಯಾಗಿದ್ದೇನೆ. ಮಿಂಚಿನಬಳ್ಳಿಯಲ್ಲಿ ಪ್ರಕಟಿಸಲು ಪ್ರೋತ್ಸಾಹಕೊಟ್ಟ ಲಲಿತಸಾಹಿತ್ಯ ಮಾಲೆಯ ಸಂಪಾದಕರಾದ ಶ್ರೀಮಾನ್ ಗೋವಿಂದ ವೆಂಕಟೇಶ ಚುಳಕಿ ಯವರಿಗೆ ನಾನು ಆಭಾರಿಯಾಗಿದ್ದೇನೆ. ಈ ಪುಸ್ತಕವನ್ನು ಇನ್ನೂ ಉತ್ತಮ ಪಡಿಸಲು ಸೂಚಿಸತಕ್ಕ ಸಲಹೆಗಳನ್ನು ಸಂತೋಷದಿಂದಲೂ ನಿರಾಳವಾದ ಮನಸ್ಸಿನಿಂದಲೂ ಸ್ವೀಕರಿಸಲು ಸಿದ್ಧನಿರುವ,

ಬೇಲೂರ — ತಮ್ಮ

೧೮—೭—೪೮ — ಎಸ್. ಅನಂತಾಚಾರ್ಯ

# ವಿಷಯಾನುಕ್ರಮಣಿಕೆ.







# ಏಷ್ಯಾ ಭೂಪಟ




ಉತ್ತರಾರ್ಧ ಗೋಳದಲ್ಲಿರತಕ್ಕ ಈ ಖಂಡವು ಉತ್ತರ ಧ್ರುವದಿಂದ ಹಿಡಿದು ಸಮಭಾಜಕ ವೃತ್ತದ ಸಮೀಪದ ವರೆಗೂ ವ್ಯಾಪಿಸಿದೆ. ಪೃಥ್ವಿಯ ಭೂಭಾಗದಲ್ಲಿ ಮೂರನೆ ಒಂದು ಭಾಗವನ್ನೊಳಗೊಂಡ ಇದು ಖಂಡಗಳಲ್ಲೆಲ್ಲಾ ದೊಡ್ಡದಾಗಿದೆ. ಅಂತೆಯೇ ಈ ಖಂಡದ ನಾಗರಿಕತೆಯು ವಿಶ್ವಕ್ಕೆ ಹಿರಿದಾದುದು. ಮೊಟ್ಟ ಮೊದಲು ಮಾನವನು ಕಾಣಿಸಿಕೊಂಡಿದ್ದು ಈ ಖಂಡದಲ್ಲೇ ಎಂದು ಹಲವಾರು ವಿಜ್ಞಾನಿಗಳ ಸಿದ್ಧಾಂತ.

ಎನ್. ಅನಂತಾಚಾರ್ಯ

# ವಿಶ್ವ ಜನಾಂಗಗಳ ಪ್ರಾಚೀನ ನಾಗರಿಕತೆ

—:○:—

## ೧ ನಾಗರಿಕತೆ

ಜನಾಂಗಗಳು ಇಂದು ಬಹಳ ಮುಂದುವರಿದಿವೆ; ನಾಗರಿಕತೆಯ ಮೆಟ್ಟಿಲುಗಳನ್ನು ಏರಿ ಹೋಗಿವೆ; ಅಂದರೆ ಅನಾಗರಿಕ ಅವಸ್ಥೆಯಿಂದ ಇಂದು ನಾವು ಯಾವುದನ್ನು ನಾಗರಿಕತೆಯೆಂದು ಪರಿಗಣಿಸುತ್ತೇವೆಯೋ, ಯಾವ ತರಹದ ಜೀವನವು ಸಭ್ಯವಾದುದೆಂದು ಒಪ್ಪುತ್ತೇವೆಯೋ ಆ ಸ್ಥಿತಿಗೆ ಬಂದಿವೆ. ಈ ರೀತಿ, ತಿಳಿಸಿದರೆ ಈ ಮಾತಿನ ಅರ್ಥವು ಸ್ಪಷ್ಟವಾಗುವದಿಲ್ಲ. ನಾಗರಿಕತೆಯ ಅರ್ಥವಿವರಣೆಯು Definition ನ್ನು ಗ್ರಹಿಸಲು ಮಾನವ ಜನಾಂಗದ ಮೂಲವನ್ನು ನೋಡುವುದೇ ಪ್ರಥಮೋಪಾಯ. ಪ್ರಪಂಚದ ಜನಾಂಗಗಳಲ್ಲಿ ಬಹಳ ಹಿಂದಿನ ಕಾಲದಲ್ಲಿಯೇ ಪೌರ್ವಾತ್ಯ ಪಾಶ್ಚಾತ್ಯ ದೇಶಗಳಲ್ಲಿ ಕೆಲವು ಜನಾಂಗಗಳು ಮುಂದುವರಿದು ನಾಗರಿಕ ಜೀವನಕ್ಕೆ ಮಾರ್ಗದರ್ಶಿಯಾಗುವಂತಹ ಮಹತ್ಕಾರ್ಯಗಳನ್ನು ಸಾಧಿಸಿದುವು.

ನಾಗರಿಕ, ನಾಗರಿಕತೆ, ನಾಗರಿಕಜೀವನ ಈ ಶಬ್ದಗಳು ವ್ಯಕ್ತಿ ಜೀವನದಲ್ಲಿ ಮಾತ್ರವಲ್ಲದೆ ಒಂದು ಜನಾಂಗದ ಇತಿಹಾಸದಲ್ಲಿಯೂ ಮಹತ್ತರವಾದ ಅಥವಾ ಪ್ರಗತಿಗಾಮಿಯಾದ ಬದಲಾವಣೆಯನ್ನು ಸೂಚಿಸುತ್ತವೆ. ಯಾಕಂದರೆ ಯಾವ ದೇಶದ ಚರಿತ್ರೆಯನ್ನು ಓದಿದರೂ ಅದರಲ್ಲಿ ನಾವು ಮುಂಚೆಯೇ ಜೀವನದ ಎಲ್ಲ ಪ್ರಗತಿಯನ್ನು ಕಾಣೆವು. ಬಹುಕಾಲ ಮನುಷ್ಯನಿಗೆ ಜೀವನವು ದುಸ್ತರವಾಗಿದ್ದಿತು. ಜೀವನದ ಸೌಲಭ್ಯಗಳು ಒದಗುತ್ತಿರಲಿಲ್ಲ. ಕೇವಲ ಕಷ್ಟದಿಂದ ಜೀವನವನ್ನು ಸಾಗಿಸಬೇಕಾಗಿದ್ದಿತು. ನಾಗರಿಕತೆಯ ಬೆಳವಣಿಗೆಯು ಒಂದು ದೊಡ್ಡ ಇತಿಹಾಸವಾಗಿರುವಂತೇ, ಭೂಮಿ ಮತ್ತು ಅದರ ಮೇಲೆ ಜೀವಿಸಿರುವ ಸಕಲ ಜೀವರಾಶಿಗಳ ಉತ್ಪತ್ತಿಗೂ ರೂಪಾಂತರಕ್ಕೂ ಒಂದು ಚರಿತ್ರೆಯಿದೆ.

ಚರಿತ್ರಕಾರರು ಹೇಳುವಂತೆ ಭೂಮಿಯು ಈಗಿನ ರೂಪವನ್ನು ಹೊಂದಿ ೫೦ ಕೋಟಿ ವರುಷಗಳಾದ ಮೇಲೆ ಜೀವವೆಂಬುದು ಚಲಿಸಲು ಮೊದಲಾಯಿತು. ಭೂಮಿಯಲ್ಲಿ ಮೊದಲು ಕಾಣಿಸಿಕೊಂಡದ್ದು ಸಸ್ಯರಾಶಿ; ನಂತರ ಕ್ರಿಮಿಗಳು, ಜಲಚರಗಳು, ಭೂಚರಗಳು ಉತ್ಪನ್ನವಾದವು. ಇದಾದ ನಂತರ ಶ್ರೇಷ್ಠ ಮನುಷ್ಯ ವರ್ಗವು ಕಾಣಿಸಿಕೊಂಡು ಸುಮಾರು ೮ ಲಕ್ಷ ವರುಷಗಳಾದವು. ಅಷ್ಟು ಕಾಲದ ಹಿಂದೆ ಕಾಣಿಸಿಕೊಂಡ ಮಾನವನು ಈಗಿನ ಮಾನವನಂತಿರಲಿಲ್ಲ. ನಿಂತು ನಡೆಯುವದಕ್ಕೂ ಕಲ್ಲುಕೊಂಬೆಗಳನ್ನು ಉಪಯೋಗಿಸಲಿಕ್ಕೂ ಮೊದಲು ಮಾಡಿದ ಕೇವಲ ಕಪಿಮಾನವನಾಗಿದ್ದನು. ಆದ್ದರಿಂದ ಆತನನ್ನು ಕಪಿಮಾನವನೆಂದೇ ಕರೆಯಬೇಕು. ಆದರೆ ಅವನು ತನ್ನ ಬುದ್ಧಿಯನ್ನು ಬೆಳಿಸಿ ಕಲ್ಲನ್ನು ಚೂಪು ಮಾಡಿ ಆಯುಧವನ್ನಾಗಿ ಉಪಯೋಗಿಸಿದಾಗ ಬುದ್ಧಿಶಕ್ತಿಯ ಪ್ರಕಾಶಕ್ಕೆ ಆರಂಭವಾಯಿತು. ಅದಕ್ಕೆ ನಾವು ಮಾನವ ಸಭ್ಯತೆಯ ಅಥವಾ ನಾಗರಿಕತೆಯ ಅಂಕುರವೆನ್ನಬಹುದು.'' ಎಂದು ಮ. ರಾ. ಎಫ್. ಜಿ. ಪಿಯರ್ಸರವರು 'ಗತಕಾಲದ ಗುರುತು' ಎಂಬ ಗ್ರಂಥದಲ್ಲಿ ಹೇಳಿದ್ದಾರೆ. ಆದರೆ ನಮ್ಮ ಹಿಂದುಗಳ ಇತಿಹಾಸದಂತೆ ಇದಕ್ಕೂ ಎಷ್ಟೋ ಲಕ್ಷ ವರ್ಷಗಳ ಹಿಂದೆಯೇ ಮಾನವ ನಾಗರಿಕತೆಯು ಆರಂಭವಾಗಿತ್ತೆಂದು ತಿಳಿದು ಬಂದಿದೆ.

ಬಹಳ ಹಿಂದಿನ ಕಾಲದಲ್ಲಿ ಮನೆಕಟ್ಟಲು ಬರದೆ, ಬೇಸಾಯ ಮಾಡಲು ಗೊತ್ತಿಲ್ಲದೆ, ಬಟ್ಟೆ ನೂಡಿಕೊಳ್ಳುವ ವಿಧಾನವು ತಿಳಿಯದೆ, ಗಡ್ಡೆಗೆಣಸುಗಳನ್ನೂ ಬೇಟೆಯಾಡಿ ಕಾಡುಮೃಗಗಳಮಾಂಸವನ್ನೂ ತಿಂದು ಮನುಷ್ಯನು ಜೀವಿಸುತ್ತಿದ್ದನು. ಅಲ್ಲದೆ ಲೋಹಗಳಿಂದ ಪಾತ್ರೆಗಳನ್ನು ಮಾಡಿಕೊಳ್ಳಲು ಅವನು ತಿಳಿದಿರಲಿಲ್ಲ. ಮತ್ತೂ ದನ, ಎಮ್ಮೆ, ಕುರಿ, ಆಡು, ನಾಯಿ ಇವುಗಳನ್ನು ಸಾಕಿಕೊಂಡು ಪ್ರಯೋಜನ ಪಡೆಯುವದು ಆತನಿಗೆ ಗೊತ್ತಿರಲಿಲ್ಲ. ಅವನು ಆಹಾರಕ್ಕೆಂದು ಸ್ಥಳದಿಂದ ಸ್ಥಳಕ್ಕೆ ಪಶುಗಳಂತೆ ಸಂಚರಿಸುತ್ತಿದ್ದನು. ಮುಂದೆ ಕ್ರಮೇಣ ಆತನು ಗುಹೆಗಳಲ್ಲಿ ವಾಸಮಾಡಲೆತ್ನಿಸಿದನು. ಕಲ್ಲು ಬೆಂಕಿಗಳ ಉಪಯೋಗವನ್ನು ಕಂಡುಕೊಂಡನು. ಕಾಡು ಮೃಗಗಳ ಚಿತ್ರವನ್ನು ತಾನು ವಾಸಿಸುತ್ತಿದ್ದ ಗುಹೆಯಲ್ಲಿ

ಬರೆಯುಹತ್ತಿದನು. ಈ ರೀತಿಯುಳ್ಳ ಜೀವನವನ್ನು ನಡೆಸುತ್ತಿದ್ದ ಕಾಲವನ್ನು ಚರಿತ್ರಕಾರರು "ಪುರಾತನ ಶಿಲಾಯುಗ" ವೆಂದು ಕರೆದಿದ್ದಾರೆ.

ಬೇಟೆಯಾಡುವಲ್ಲಿಯಾಗಲಿ ಕಲ್ಲಿನ ಉಪಯೋಗದಲ್ಲಿಯಾಗಲಿ ನಾಗರಿಕತೆಯು ಕಾಣಬರಲಿಲ್ಲ. ಕಾಲಕ್ರಮೇಣ ಬದಲಾವಣೆ ಬಂದಿತು. ಹೊಸ ಶಿಲಾಯುಗದಲ್ಲಿ ಮನುಷ್ಯನು ತನ್ನ ಬುದ್ಧಿಯನ್ನು ಚೆನ್ನಾಗಿ ಉಪಯೋಗಿಸಿಕೊಂಡು ಜೀವನದ ಅನೇಕ ಅನುಕೂಲಗಳನ್ನು ಕಲ್ಪಿಸಿಕೊಂಡನು. ಆಹಾರಕ್ಕಾಗಿ ಅಲೆಯುತ್ತಿದ್ದ ಅನಾಗರಿಕರ ಗುಂಪುಗಳು ಫಲವತ್ತಾದ ನದೀತೀರಗಳಲ್ಲಿಯೂ ಕಣಿವೆಗಳಲ್ಲಿಯೂ ನೆಲೆಸಲುಪಕ್ರಮಿಸಿದವು. ಮರದ ಕೊಂಬೆಗಳಿಂದ ಗುಡಿಸಲುಗಳನ್ನು ಕಟ್ಟಿಕೊಂಡವು; ನಾಯಿ ಕುದುರೆಗಳನ್ನು ಸಾಕಿ, ಅವುಗಳ ಸಹಾಯದಿಂದ ಬೇಟೆಯಾಡತೊಡಗಿದವು; ದನ ಎಮ್ಮೆ ಕುರಿ ಆಡುಗಳನ್ನು ಸಾಕಿ, ಅವುಗಳ ಹಾಲನ್ನು ಉಪಯೋಗಿಸಲಾರಂಭವಾಯಿತು; ಬೇಸಾಯಕ್ಕೆ ಆರಂಭವಾಯಿತು; ಮಣ್ಣಿನಿಂದ ಪಾತ್ರೆಗಳನ್ನೂ ಕಲ್ಲಿನಿಂದ ಆಯುಧಗಳನ್ನೂ ಮಾಡುವ ಕ್ರಮವು ರೂಢವಾಯಿತು; ಕೆಲವು ಚರಿತ್ರಕಾರರು ಈ ಬದಲಾವಣೆಗಳು ಕ್ರಿ. ಪೂ. ೧೦,೦೦೦ ದಿಂದ ೫೦,೦೦೦ ದವರೆಗೆ ನಡೆದವೆಂದು ಅಭಿಪ್ರಾಯವುಳ್ಳವರಾಗಿದ್ದಾರೆ. ಈ ಕಾಲವನ್ನು 'ನೂತನ ಶಿಲಾಯುಗ'ವೆಂದು ವೆಂದು New Stone Age ಕರೆದಿದ್ದಾರೆ.*

ತರುವಾಯ, ಮನುಷ್ಯನು ಬುದ್ಧಿ ವಿಕಾಸಗೊಂಡಂತೆಲ್ಲ ಜೀವನಕ್ಕೆ ಬೇಕಾದ ಇತರ ಸಾಧನೋಪಾಯಗಳನ್ನು ಕಂಡು ಹಿಡಿದನು. ಅಂಥ ಕಾಲಗಳನ್ನು 'ಕಬ್ಬಿಣ ಯುಗ' 'ತಾಮ್ರ ಯುಗ' 'ಕಂಚಿನ ಯುಗ' ಮತ್ತು ಎಲ್ಲಕ್ಕೂ ಮಿಗಿಲಾದುದನ್ನು 'ಸ್ವರ್ಣ ಯುಗ'ವೆಂದು ಕರೆಯಲಾಗಿದೆ.

ಮೇಲೆ ವಿವರಿಸಿದ ನೂತನ ಶಿಲಾಯುಗದಲ್ಲಿ ಆದ ಬದಲಾವಣೆಯೇ ನಾಗರಿಕ ಜೀವನದ ಮೊದಲನೆಯ ಮೆಟ್ಟಲು; ನವಜೀವನದ ಆರಂಭ.

---

* ಭಾರತೀಯ ಇತಿಹಾಸಕಾರರಿಗೆ ಈ ಕಾಲಮಾನ್ಯವಿಲ್ಲ. ಅವರು ಬಹುಹಿಂದೆ ಹೋಗುತ್ತಾರೆ.

ಈ ರೀತಿ ಪ್ರಗತಿಗಾಮಿಯಾದ ಬದಲಾವಣೆಯು ಸನ್ನಿವೇಶದ ಪ್ರಭಾವ ದಿಂದ ಆಯಿತೆಂದರೆ ತಪ್ಪಾಗದು. ಮತ್ತು ಬುದ್ಧಿಯು ಕೂಡ ಅನೇಕ ಜೀವನದ ಆವಶ್ಯಕತೆಗಳ ಸನ್ನಿವೇಶ ಪ್ರಭಾವದಿಂದ ಮಾರ್ಪಾಟಾಯಿತು. ಸ್ಥಳದಿಂದ ಸ್ಥಳಕ್ಕೆ ಅಲೆಯುತ್ತಿದ್ದ ಅನಾಗರಿಕ ಜನರ ಗುಂಪು Nomadic Tribes ಪ್ರಕೃತಿಯಲ್ಲಿ ನೀರು, ನೆರಳು, ಉಪಯುಕ್ತವಾದ ಸಸ್ಯಗಳು ಇವುಗಳ ಸೌಕರ್ಯವಿದ್ದೆಡೆಯಲ್ಲಿಯೇ ಕೆಲವು ದಿನಗಳಾದರೂ ನೆಲೆಸಿರಲು ಬಯಸಿತೆಂದು ಕಂಡು ಬರುತ್ತದೆ. ಅಲ್ಲಿ ನೆಲೆಸಿದಾಗ ಸಣ್ಣಪುಟ್ಟ ಬದಲಾವಣೆಗಳು ಅವರಿಗೆ ಗೋಚರವಾಗಿ, ಅವರ ಮನಸ್ಸನ್ನು ಅವು ಸೆಳೆದಿರಬೇಕು. ಅವರು ವಾಸವಾಡತೊಡಗಿದ ಸುರಕ್ಷಿತವಾದ ಪ್ರದೇಶದಲ್ಲಿ ಹೆಂಗಸರು ಮಕ್ಕಳುಗಳು ಕೂಡಿ ವಾಸಿಸುತ್ತಿದ್ದಾಗ ಅವರು ಉಪಯೋಗಿಸುತ್ತಿದ್ದ ಧಾನ್ಯಗಳು ಭೂಮಿಯಲ್ಲಿ ಬಿದ್ದು ಮೊಳೆತು ಗಿಡವಾಗಿ ಬೆಳೆದದ್ದು ಅವರಿಗೆ ಗೋಚರವಾಗಿರಬೇಕು. ಸುಪ್ರಸಿದ್ಧ ಪಾಶ್ಚಾತ್ಯ ಚರಿತ್ರಕಾರರಾದ ಎಚ್. ಜಿ. ವೆಲ್ಸ H. G. Wells ರವರು ತಮ್ಮ ಪುಸ್ತಕಗಳಲ್ಲೊಂದಾದ ಔಟಲಾಯಿನ ಅಫ್ ಹಿಸ್ಟರಿ Outline of History ಎಂಬ ಪುಸ್ತಕದಲ್ಲಿ ,,ಬೇಸಾಯವು ಮೊದಲು ಹೆಂಗಸರಿಂದ ಆರಂಭಿಸಲ್ಪಟ್ಟಿತೆಂದೂ ಮತ್ತು ಪ್ರಕೃತಿಯು ಈಜಿಪ್ತಿನಲ್ಲಿ ಈ ವ್ಯವಸಾಯವನ್ನು ಮನುಷ್ಯನಿಗೆ ಸುಲಭಸಾಧ್ಯವಾಗಿ ಕಲಿಸಿದಂತೆ ಇನ್ನಾವ ದೇಶದಲ್ಲಿಯೂ ಸಾಧ್ಯವಿಲ್ಲೆಂದೂ ಎಲಿಯಟ್ ಸ್ಮಿಥ್ Eliot Smith ಎಂಬ ಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ'' ಈ ಅಭಿಪ್ರಾಯಗಳು ಚರ್ಚಾಸ್ಪದವಾದರೂ ಸತ್ಯಕ್ಕೆ ದೂರವಾಗಿಲ್ಲ. ಸಂಕ್ಷಿಪ್ತದಲ್ಲಿ ವ್ಯವಸಾಯವೇ ನಾಗರಿಕತೆಯ ಬೆಳವಣಿಗೆಯಲ್ಲಿ ಮೊದಲ ಮೆಟ್ಟಲೆಂಬುದನ್ನು ಬಹುತರವಾಗಿ ಎಲ್ಲರೂ ಒಪ್ಪುತ್ತಾರೆ. ಅಲೆದಾಡುತ್ತಿದ್ದ ಪಶುಪಾಲಕ ಗುಂಪಿನ ಜನರಿಗೆ ಬೇಸಾಯವು ಗೊತ್ತಾದುದು ನೂತನ ಶಿಲಾಯುಗದ ಕಡೆಕಡೆಗೆ. ಯಾಕೆಂದರೆ ಯಾವ ಕಾಲದಿಂದ ಬೇಸಾಯಕ್ಕೆ ಅನಾಗರಿಕ ಪಂಗಡಗಳು ಆಸಕ್ತಿವಹಿಸಿದವೋ ಅಲ್ಲಿಗೆ ಅವುಗಳ ಮಿತಿಯಿಲ್ಲದ ಅಲೆದಾಟ, ನ್ಯಾಯಾನ್ಯಾಯಗಳ ವಿಚಾರವಿಲ್ಲದೆ ಬೇರೊಂದು ಪಂಗಡದ ವಸ್ತುಗಳ ಅಪಹರಣ, ಅಥವಾ ಇನ್ನೊಂದು ಕಡೆಯ ನೆಲೆಸುವಿಕೆ ಈ ಮುಂತಾದ ಅವಸ್ಥೆಗಳು ಮುಗಿದವೆನ್ನಬಹುದು. ಕ್ರಮೇಣ ಮಾನವನು

ತಾನು ಹಿಂಬಾಲಿಸಿ ಬೇಟೆಯಾಡಿ ಹಿಂಸಿಸುತ್ತಿದ್ದ ಮೃಗಗಳನ್ನು ಪ್ರೀತಿಯಿಂದ ಸಾಕುವುದು, ಬಿಸಿಲು ಚಳಿ ಮಳೆ ಗಾಳಿಗಳಿಂದ ಸುರಕ್ಷಿತವಾಗಿರಲು ಗುಡಿಸಲುಗಳನ್ನು ಕಟ್ಟಿಕೊಳ್ಳುವದು, ಈ ಮುಂತಾದ ರೀತಿಯಲ್ಲಿ ಮುಂದುವರಿದನು. ಈ ಮಹತ್ತರವಾದ ಬದಲಾವಣೆಗಳು ನೂತನ ಶಿಲಾಯುಗದಲ್ಲಿ ಆದುವು.

ನಾಗರಿಕತೆಯನ್ನು ಎಚ್. ಜಿ. ವೆಲ್ಸರವರು ಈ ರೀತಿ ವಿವರಿಸಿದ್ದಾರೆ. "ನಾಗರಿಕತೆಯು ಪ್ರಾಸಂಗಿಕವಾಗಿ ಗೋದಿ ಬೆಳೆಯುವದಕ್ಕಿಂತ ಹೆಚ್ಚಿನದಾದ ಒಂದು ಸಂಗತಿಯಾಗಿದೆ. ಒಡೆತನದ ಭೂಮಿಯಲ್ಲಿ ಒಕ್ಕಲುತನದ ಹೋರೆ ನಡೆಸುತ್ತ, ಮನೆಕಟ್ಟಿಕೊಂಡು ನಿರಂತರವಾಗಿ ನೆಲೆಸಿ ಏಕಛತ್ರಾಧಿಪತ್ಯದಲ್ಲಿ, ಒಂದು ಪಟ್ಟಣದಲ್ಲಿಯೇ, ಕೋಟೆಯಲ್ಲಿಯೇ—ಜನತೆಯು ಜೀವನವನ್ನು ನಡೆಸುವಂತೆ ವ್ಯವಸ್ಥೆಗೊಳಿಸುವದು ನಾಗರಿಕತೆಯು. "Civilisation is something more than the occasional growing of wheat. It is the settlement of men upon an area continuously cultivated and possessed, who live in buildings continuously inhabited, with a common rule and a common city or citadel."

ಈ ರೀತಿಯ ವ್ಯವಸ್ಥೆಯು ಸುಮಾರು ಎಂಟು ಸಾವಿರ ವರುಷಗಳ ಹಿಂದೆಯೇ ಆರಂಭವಾಗಿರಬೇಕು. ಆದರೆ ಇಲ್ಲಿ ಯಾವ ಜನಾಂಗಗಳು ಮೇಲ್ಕಂಡ ರೀತಿಯಲ್ಲಿ ಮುಂದುವರಿದು ಖ್ಯಾತಿಯನ್ನು ಗಳಿಸಿ ಪ್ರಗತಿಯ ಮೇಲ್ಮೆಯನ್ನು ಮೀರಿದವೆಂಬುದನ್ನು ತಿಳಿಯುವದು ಆವಶ್ಯಕ.

ಪ್ರಪಂಚದ ನಾಗರಿಕತೆಯನ್ನು ಸ್ಥೂಲವಾಗಿ ಪೌರ್ವಾತ್ಯ-ಪಾಶ್ಚಾತ್ಯ ಎಂದು ಎರಡು ಭಾಗಗಳಾಗಿ ವಿಂಗಡಿಸಬಹುದು. ಈ ರೀತಿಯ ವಿಭಜನೆಯು ಭೌಗೋಲಿಕ ದೃಷ್ಟಿಯಿಂದ ಸುಲಭಸಾಧ್ಯವಾದರೂ ಸಾಂಸ್ಕೃತಿಕ ದೃಷ್ಟಿಯಿಂದ ನ್ಯಾಯವೇ ಎಂದು ಕೆಲವರು ತರ್ಕಿಸಬಹುದು. ಆದರೆ ಕಾಲ, ದೇಶ, ಸಂಸ್ಕಾರಸಾಮರಸ್ಯ ಇವುಗಳ ದೃಷ್ಟಿಯಿಂದಲೂ ಆಡಳಿತೆಯ ಪದ್ಧತಿ, ಸಾಮಾಜಿಕ ಸಂಸ್ಥೆ, ಸಾಹಿತ್ಯ ಸ್ವರೂಪ, ಜೀವನತತ್ವ ಇವುಗಳ ಪರೀಕ್ಷೆಯಿಂದ ಪ್ರತ್ಯೇಕವಾದ ಒಂದು ಅಭ್ಯಾಸದ ಸೌಕರ್ಯಕ್ಕಾಗಿ ತಾರತಮ್ಯ ದೃಷ್ಟಿಯಿಂದಲೂ ಮಾಡಲಾಗುವ ಈ ವಿಭಜನೆಯಿಂದ, ಯಾವ ಅನ್ಯಾಯವೂ

ಆಗಲಾರದು. ಮುಂದಿನ ಅಧ್ಯಾಯದಲ್ಲಿ ಪೌರ್ವಾತ್ಯ ಪಾಶ್ಚಾತ್ಯ ನಾಗರಿಕತೆಗಳ ಬೆಳವಣಿಗೆಯ ಸಂಶೋಧನ ರೀತಿಗಳನ್ನು ವಿಚಾರ ಮಾಡಲಾಗಿದೆ.



## ೨ ಸಂಶೋಧನಗಳು ಮತ್ತು ಪುರಾತನ ನಾಗರಿಕ ದೇಶಗಳು

ಬಹಳ ಹಿಂದಿನ ಕಾಲದಲ್ಲಿಯೇ ನಾಗರಿಕತೆಯ ದೃಷ್ಟಿಯಿಂದ ಅತ್ಯುಚ್ಚ ಸ್ಥಿತಿಯಲ್ಲಿ ಬಾಳಿದ ಜನಾಂಗಗಳ ಚರಿತ್ರೆಯು ಸಾಕಷ್ಟು ಸಾಧಾರವಾಗಿ ನಮಗೆ ತಿಳಿದು ಬಂದಿರುತ್ತದೆ. ಪ್ರಾಕ್ತನ ಮತ್ತು ಇತಿಹಾಸ ಸಂಶೋಧಕರಲ್ಲಿ ಕೆಲವರು ತಮ್ಮ ಜೀವಮಾನವನ್ನೆಲ್ಲ ಅರ್ಪಿಸಿ ಭೂಗರ್ಭದಲ್ಲಿ ಅಡಗಿರತಕ್ಕ ನಾಗರಿಕ ಜೀವನದ ಕುರುಹುಗಳನ್ನು ಕಂಡು ಹಿಡಿದು, ಅವುಗಳ ನಿರ್ಮಾಪಕರನ್ನು ಗುರುತಿಸಿದ್ದಾರೆ. ಈ ಕಾರ್ಯ ದಲ್ಲಿ ಪೌರ್ವಾತ್ಯ ಸಂಶೋಧಕರು ಒಕ್ಕಟ್ಟಿನಿಂದಲೂ ಉತ್ಸಾಹದಿಂದಲೂ ಕೆಲಸ ಮಾಡಿ, ನಮಗೆ ಗೊತ್ತಿಲ್ಲದ ಮತ್ತು ಸಂಶಯಾತ್ಮಕವಾಗಿದ್ದ ಕೆಲವು ಐತಿಹಾಸಿಕ ಅಂಶಗಳನ್ನು ನಿರ್ಧರಿಸಿರುತ್ತಾರೆ.

ಜಗದ್ವಿಖ್ಯಾತ ಇತಿಹಾಸ ಸಂಶೋಧಕರಾದ ಸರ್ ಲಿಯೋನಾರ್ಡ ವುಲೆ Sir Leonard Wooley ಯವರ 'ಡಿಗ್ಗಿಂಗ್ ದಿ ಪಾಸ್ಟ' Digging the Past ಎಂಬ ಗ್ರಂಥದಿಂದಲೂ ಮತ್ತು ಭಾರತ ಸರಕಾರದಲ್ಲಿ ಪ್ರಾಚ್ಯ ಸಂಶೋಧನಾ ಇಲಾಖೆಯ ಡಾಯರೆಕ್ಟರರಾಗಿದ್ದ ಸರ್ ಜಾನ್ ಮಾರ್ಷಲ್ ರವರು Sir John Marshall ಬರೆದಿರತಕ್ಕ "ಮೋಹಂಜೋದಾರೊ

ಮತ್ತು ಸಿಂಧೂ ನಾಗರಿಕತೆ" Mohenjo Daro and Indus Civilisation ಎಂಬ ಶಿರೋನಾಮದಿಂದ ಬರೆದ ಮೂರು ಅದ್ಭುತ ಗ್ರಂಥಗಳಿಂದಲೂ ಸರ್ ಅಲೆಗ್ಝಾಂಡರ್ ರೆಯುವರು Sir Alexander Ray ತಿನ್ನವೆಲ್ಲಿ ಡಿಸ್ಟ್ರಿಕ್ಟಿನಲ್ಲಿ ನಡೆಸಿರತಕ್ಕ ಭೂಸಂಶೋಧನೆಗಳಿಂದಲೂ ನಮಗೆ ಭಾರತೀಯರ ನಾಗರಿಕತೆಯ ವಿಷಯವಾಗಿ ಆಶ್ಚರ್ಯವಾದ ಮತ್ತು ಅಮೂಲ್ಯವಾದ ವಿಷಯಗಳು ತಿಳಿದು ಬಂದಿವೆ. ಭೂಗರ್ಭಶೋಧನೆಯು ಭಾರತದಲ್ಲಿ ಮಾತ್ರವಲ್ಲದೆ, ಈಜಿಪ್ತ, ಗ್ರೀಸ, ಪುರಾತನ ರೋಮ ಇವುಗಳಲ್ಲಿಯೂ ನಡೆದಿದೆ. ಮೇಜರ ಕ್ಲೀಮನ್ನರವರು ಪುರಾತನ ಟ್ರಾಯ Tray ಪಟ್ಟಣದ ಸ್ಥಳದಲ್ಲಿ ಭೂಸಂಶೋಧನೆಗಳನ್ನು ನಡೆಸಿದುದರ ಸಲುವಾಗಿ ಈಜಿಯನ್ Agean ಸಂಸ್ಕೃತಿಯ ವಿವರಗಳು ತಿಳಿದುಬಂದಿವೆ. ಮೇಲೆ ತಿಳಿಸಿದ ಈ ಮಹನೀಯರು ವಿಶ್ವವಿಖ್ಯಾತರಾದ ಪ್ರಾಚ್ಯ ಸಂಶೋಧನಾನಿಪುಣರು. ಅವರ ಶ್ರಮಕ್ಕೆ ನಾಗರಿಕ ಪ್ರಪಂಚವು ಚಿರಋಣಿಯಾಗಿದೆ. ಸುಸಂಸ್ಕೃತ ಇತಿಹಾಸ ವಿಶಾರದರಿಗೆ ಮತ್ತು ವಿಜ್ಞಾನಿಗಳಿಗೆ ಮಾತ್ಸರ್ಯಕ್ಕೂ ಅಹಂಕಾರಕ್ಕೂ ಸಂಕುಚಿತ ಮನೋವೃತ್ತಿಗೂ ಸಂಬಂಧವಿಲ್ಲ. ಪಾಶ್ಚಾತ್ಯರಂತೆ ನಮ್ಮವರೂ ನಮ್ಮ ದೇಶದ ಇತಿಹಾಸವನ್ನು ಅವರ ಪ್ರಾಚೀನ ಸ್ವರೂಪವನ್ನೂ ಕಂಡುಹಿಡಿಯಲು ಶ್ರಮವಹಿಸಿರುವರು: ಇಂದಿಗೂ ಅವಿಶ್ರಾಂತರಾಗಿ ಶ್ರಮಪಡುತ್ತಲಿದ್ದಾರೆ. ಕೀರ್ತಿಶೇಷರಾದ ಆರ್. ಡಿ. ಬ್ಯಾನರ್ಜಿಯವರು ಮೋಹಂಜೋದಾರೋ ನಾಗರಿಕತೆಯ ಸ್ವರೂಪವನ್ನು ಕಂಡು ಹಿಡಿಯಲು ಬಹಳ ಶ್ರಮತೆಗೆದುಕೊಂಡರು. ಅವರಂತೆಯೇ ನಿವೃತ್ತ ಪ್ರಾಚ್ಯ ಸಂಶೋಧನಾ ಡಾಯರೆಕ್ಟರರಾಗಿದ್ದ ರಾವಬಹಾದ್ದೂರ ಕೆ. ಎನ್. ದೀಕ್ಷಿತರು, ರಾವಬಹಾದ್ದೂರ ಎಚ್. ಕೃಷ್ಣಶಾಸ್ತ್ರಿಗಳೂ, ಲೆವಿಸ್ ರೈಸ್, ಗೋವಿಂದಪೈಯವರು ಮುಂತಾದ ಮಾನ್ಯರು ಪ್ರಾಚ್ಯ ಸಂಶೋಧನಾಕಾರ್ಯಗಳನ್ನು ಶ್ಲಾಘನೀಯವಾಗಿ ಮಾಡಿರುವರು.

ಪ್ರಾಚ್ಯ ಸಂಶೋಧನೆಯ ಕೆಲಸಗಳು ಅದರಲ್ಲಿಯೂ ಭೂಶೋಧನೆಯ ಕೆಲಸಗಳು ಇನ್ನೂ ಮುಗಿದಿಲ್ಲ. ಪುರಾಣ ಪ್ರಸಿದ್ಧವಾದ ಅಮರಾವತಿ, ಉಜ್ಜಯಿನಿ, ಪಾಟಲಿಪುರ, ಇಂದ್ರಪ್ರಸ್ಥ (ದೆಹಲಿ) ಇವೇ ಮೊದಲಾದ ಭವ್ಯನಗರಗಳು ಕಟ್ಟಲ್ಪಟ್ಟಿದ್ದ ಸ್ಥಳಗಳಲ್ಲಿ ಭೂಶೋಧನೆಯು ಇನ್ನೂ

ನಡೆಯಬೇಕಾಗಿದೆ. ಅನೇಕ ಕಡೆಗಳಲ್ಲಿ ನಶಿಸಿಹೋಗಿ ಭೂಗತವಾಗಿರತಕ್ಕ ಕಟ್ಟಡಗಳ ಅವಶೇಷಗಳು, ಪುರಾತನ ವಿಗ್ರಹಗಳು, ನಾಣ್ಯಗಳು, ಶಿಲಾ ಶಾಸನಗಳು, ಒಡವೆಗಳು, ಅಲ್ಲದೆ ಬೌದ್ಧಮತಕ್ಕೆ ಸಂಬಂಧಪಟ್ಟ ಸ್ಮಾರಕ ಗಳು ಮುಂತಾದವುಗಳು ಸಿಕ್ಕಿವೆ. ಇನ್ನೂ ದೊರೆಯುತ್ತಲಿವೆ. ಅವನ್ನು ಸಂಶೋಧನಾ ಇಲಾಖೆಯವರು ಸಂಗ್ರಹಿಸಲು ಅತ್ಯಾಸಕ್ತಿಯುಳ್ಳವರಾಗಿ ದ್ದಾರೆ. ಈ ಸಂಶೋಧನೆಗಳು ಯಶಸ್ವಿಯಾಗಲು ಸರಕಾರದೊಂದಿಗೆ ಜನತೆಯ ಸಹಕಾರವು ಅಗತ್ಯ. ಈ ಸಂಶೋಧನೆಗಳಿಂದ ತಿಳಿದುಬಂದ ವಿವರಗಳು, ಹೊಸ ವಿಷಯಗಳು–ಕತ್ತಲಲ್ಲಿ ಇತಿಹಾಸವನ್ನು ಬರೆವವರಿಗೆ- ಮಿಂಚಿನಂತೆ ಮಾರ್ಗದರ್ಶಿಗಳಾಗುತ್ತವೆ· ಚರಿತ್ರೆ ಬರೆಯಲುಭಿನ್ನಾಭಿ ಪ್ರಾಯಕ್ಕೆ ಎಡೆಯಿಲ್ಲದಂತೆ ನಂಬಲು ಇವುಗಳೇ ಅರ್ಹವಾದ ಅಧಾರ ಗಳು. ಈ ಸಂಶೋಧನೆಯ ಮಹತ್ವವನ್ನರಿತೇ ಪ್ರಪಂಚದ ಮುಖ್ಯ ದೇಶಗಳ ಲ್ಲೆಲ್ಲ ಸಂಶೋಧನಾ ಇಲಾಖೆಗಳು ಸ್ಥಾಪಿತವಾಗಿ ನುರಿತ ಸಂಶೋಧಕರ ನೇತೃತ್ವದಲ್ಲಿ ಕೆಲಸ ಮಾಡುತ್ತಆಯಾಯ ದೇಶದ ಮತ್ತು ವಿಶ್ವದ ಸಂಬಂಧ ವಾದಚರಿತ್ರೆಯನ್ನು ಸವಿಸ್ತಾರವಾಗಿ ಬರೆಯಲು ಸಹಾಯಕವಾಗಿವೆ. ಆರ್ಷೇ ಯವಾಗಿಉಳಿದ ಕಟ್ಟಡಗಳಿಂದ ಕೂಡ ಹಿಂದಿನ ಚರಿತ್ರೆಯು ಬರೆಯಲ್ಪಟ್ಟಿದೆ. ಇವುಗಳ ಮಹತ್ವವನ್ನು ಅರಿತೇ ಭಾರತ ಸರಕಾರದವರು ಪುರಾತನ ಕಟ್ಟಡಗಳನ್ನು ಕಾಯತಕ್ಕ ಶಾಸನವನ್ನು ಮಾಡಿ ಅದನ್ನು ೧೯೦೪ ರಿಂದ ರೂಢಿಯಲ್ಲಿ ತಂದಿರುತ್ತಾರೆ. Ancient Monuments Preservation Act 1904. ಈ ಶಾಸನವನ್ನು ಅನ್ವಯಿಸಿ ಮೈಸೂರ ಸರಕಾರದವರೂ ಪ್ರಾಚೀನ ದೇವಾಲಯ ಮಸೀದೆ ಮೊಲಾದ ಸ್ಮಾರಕಗಳು ಇರುವಲ್ಲೆಲ್ಲ ಇಂಗ್ಲೀಷ ಕನ್ನಡ ಬೋರ್ಡುಗಳನ್ನು ಹಾಕಿಸಿರುತ್ತಾರೆ.

ಶ್ರೀರಂಗಪಟ್ಟಣ, ಬೇಲೂರು, ಹಳೇಬೀಡು, ಇವುಗಳಲ್ಲಿಯ ಪ್ರಸಿದ್ಧ ಗುಂಬಸ್ ಮತ್ತು ದೇವಾಲಯಗಳ ದ್ವಾರಗಳಲ್ಲಿ ಮಾತ್ರವಲ್ಲದೆ ಮಂಜರಾ ಬಾದ ಪಾಳೇಗಾರರ ಕೋಟೆಯ ಬಾಗಿಲಲ್ಲೂ ಇದರಂತೆ ಪ್ರಕಟನೆಯನ್ನೂ ಹಾಕಿಸಿರುತ್ತಾರೆ. ಭಾರತದ ಇತರೆಡೆಗಳಲ್ಲಿಯೂ ಇದೇ ರೀತಿಯ ರಕ್ಷಣಾ ವಿಧಾನವು ರೂಢಿಯಲ್ಲಿದೆಯೆಂದು ನನ್ನ ನಂಬಿಗೆ. ಹೀಗಿದ್ದೂ ಭಾರತದ

ಸಾವಿರಾರು ಪ್ರಾಚೀನ ವಸ್ತುಗಳು ಪರದೇಶಗಳಿಗೆ ಸಾಗಿಹೋಗಿವೆ. ಪ್ರಾಯಶಃ ಈ ಕಾನೂನು ಬರುವ ಮುಂಚೆಯೇ ಸಂಶೋಧನಕ್ಕೆಂದು ಅವುಗಳನ್ನು ತೆಗೆದುಕೊಂಡು ಹೋಗಿರಬಹುದು. ಇತ್ತೀಚೆಗೆ ಬುದ್ಧನ ಸ್ಮಾರಕವನ್ನು ಸಿಂಹಳದ್ವೀಪಕ್ಕೆ ಲಂಡನ್ನಿನಿಂದ ತರಲಾಯಿತು.

ಚರಿತ್ರೆಗೂ ನಾಗರಿಕತೆಗೂ ಬಹಳ ಮುಖ್ಯವಾದ ಸಂಬಂಧವಿದೆ. ಇತಿಹಾಸ ಪ್ರಸಿದ್ಧವಾದ ಜನಾಂಗದವರೇ ನಾಗರಿಕ ದೇಶಕ್ಕೆ ಸೇರಿದವರು; ನಾಗರಿಕತೆಯ ಬೆಳವಣಿಗೆಗೆ ಅಸ್ಥಿಭಾರ ಹಾಕಿದವರು. ಒಂದು ನಾಗರಿಕ-ತೆಯ ಬೆಳವಣಿಗೆಯಲ್ಲಿ ಅನೇಕ ಅಂತಸ್ತುಗಳಿವೆ, ಆದಕಾರಣ ಅಂತಹ ವಸ್ತುಗಳು ಒಂದೇ ನಾಗರಿಕತೆಯ ಕೆಲವು ಕಾಲದವುಗಳಾಗಿ ಭಾವಿಸ ಬಹುದು. ಇವನ್ನೆಲ್ಲ ಸಂಶೋಧನಾ ಇಲಾಖೆಯ ಪ್ರದರ್ಶನಾಲಯಗಳಲ್ಲಿರಿಸಿ ದ್ದಾರೆ. ಲಂಡನ್ನ ನಗರದ ಬ್ರಿಟಿಶ ಮ್ಯೂಝಿಯಮ್ಮಿನಲ್ಲಿ (The British Museum) ಅಸಂಖ್ಯಾಕ ಪ್ರಾಚೀನ ವಸ್ತುಗಳು ಸಂಗ್ರಹಿಸಲ್ಪಟ್ಟಿವೆ. ಕಲಕತ್ತೆ, ದೇಹಲಿ, ಬೆಂಗಳೂರು, ಮೈಸೂರು, ಮದರಾಸು, ಬಡೋದೆ, ತಿರುವಾಂಕೂರು ಮೊದಲಾದ ಕಡೆಗಳಲ್ಲಿಯೂ ಇಂಥ ಪ್ರದರ್ಶನಾಲಯ ಗಳಿವೆ. ರಾಜಮಹಾರಾಜರನೇಕರು ತಮ್ಮ ಭವ್ಯಭವನಗಳನ್ನು ಅಪೂರ್ವ ಚಿತ್ರಕಲೆಗಳಿಂದ, ಕಲಾನೈಪುಣ್ಯವನ್ನು ಬೆಳಗುವ ಕಲಾವಸ್ತುಗಳಿಂದ ಅಲಂಕರಿಸಿದ್ದಾರೆ. ಇಂದಿಗೂ ಲಲಿತಕಲೆಗಳನ್ನು ಅವರು ಪೋಷಿಸುತ್ತಿ ದ್ದಾರೆ. ಅಲ್ಲದೆ ಮೈಸೂರು, ಪುಣೆ, ಬಡೋದೆ, ತಿರುವಾಂಕೂರುಗಳಲ್ಲಿ ಪ್ರಾಚೀನ ವಸ್ತುಸಂಗ್ರಹ ಶಾಖೆಗಳು ಮತ್ತು ಸಂಶೋಧನಾ ಕೇಂದ್ರಗಳು ಸ್ಥಾಪಿತವಾಗಿವೆ. (Oriental Library at Mysore, The Bhandarkar Research Institute at Poona, Oriental Research Institute at Baroda.)

ಮೇಲೆ ವಿವರಿಸಿದಂತಹ ಪುರಾತನ ಪಟ್ಟಣಗಳ ಅವಶೇಷಗಳು ಪುರಾತನ ರಾಜ್ಯಗಳು ಇದ್ದ ಕಡೆಯಲ್ಲಿಯೇ ವಿಶೇಷವಾಗಿ ದೊರೆತಿವೆ. ಈಜಿಪ್ತಿನಲ್ಲಿನ ಪಿರಮಿಡ್ಡುಗಳು Pyramids ಆ ದೇಶದಲ್ಲಿ ದೊರೆತ ಅದ್ಭುತ ಸ್ಮಾರಕಗಳು. ಅವುಗಳು ಚಿತ್ರಯುಕ್ತವಾಗಿವೆ. ಅವುಗಳ ಒಳಗೆ ಪ್ರವೇಶ ಮಾಡಲು ಒಂದು ಸಣ್ಣ ಕಿಂಡಿಯಷ್ಟು ದಾರಿಯನ್ನು ಬಿಟ್ಟಿರುತ್ತಾರೆ.

ಆ ಜನರಲ್ಲಿ ರೂಢಿಯಲ್ಲಿದ್ದ ಮತೀಯ ಭಾವನೆಯೇ ಈ ರೀತಿಯ ಕಟ್ಟಡ ಹಾಗು ಸ್ಮಾರಕ ನಿರ್ಮಾಣಕ್ಕೆ ಕಾರಣ. ಅವರಿಗೆ ದೇಹ ಮತ್ತು ಆತ್ಮ ಇವುಗಳ ಸಂಬಂಧದ ಅರಿವು ಉಂಟಾಗಿತ್ತು. ಆತ್ಮವನ್ನು 'ಕಾ' ಎಂದು ಸಂಕೇತಾರ್ಥದಲ್ಲಿ ತಿಳಿದಿದ್ದರು. ಪ್ರಾಣಹೋದಬಳಿಕ ಆತ್ಮವು ದೇಹವನ್ನು ಸೇರಿಕೊಳ್ಳುತ್ತದೆಂದೂ ಮತ್ತು ಜೀವಂತ ಮನುಷ್ಯನಿಗೆ ಬೇಕಾಗಬಹುದಾದ ಪದಾರ್ಥಗಳು ನಂತರವೂ ಬೇಕೆಂದು ತಿಳಿದ ಕಾರಣ ಅಲ್ಲಿಯ ಸ್ಮಾರಕಗಳಲ್ಲಿ ಅನೇಕ ದಿನಚರಿಯ ವಸ್ತುಗಳು ಮತ್ತು ಒಡವೆಗಳು ದೊರೆತಿವೆ.

ಇತ್ತೀಚಿಗೆ ಭೂಶೋಧನೆಯ ಸಲುವಾಗಿ ಹರಪ್ಪ ಮತ್ತು ಮೋಹಂಜೋದಾರೋದಲ್ಲಿ ದೊರೆತಿರತಕ್ಕ ಪುರಾತನ ಪಟ್ಟಣಗಳ ಅವಶೇಷಗಳಲ್ಲಿ ಆ ಜನರ ಜೀವನದ ಮಟ್ಟ ಗೊತ್ತಾಗುತ್ತದೆ. ಅಲ್ಲಿ ದೊರೆತ ಕಟ್ಟಡಗಳ ರಚನೆ, ಅಲ್ಲಿ ಸಿಕ್ಕ ಒಡವೆ, ಅವರ ನಿತ್ಯ ಜೀವನದ ಸಲಕರಣೆ ಇವೇ ಮುಂತಾದವುಗಳಿಂದ ಅವರಿಗೆ ಉತ್ತಮವಾಗಿ ಜೀವನ ನಡೆಸುವುದು ಗೊತ್ತಿತ್ತೆಂಬುದಲ್ಲದೆ ಅವರೇ ಒಂದು ನಾಗರಿಕತೆಯ ಮೂಲಪುರುಷರೆನಿಸಿಕೊಳ್ಳುವಷ್ಟು ಆಧಾರಗಳೂ ದೊರೆತಿವೆ. ಬಹಳ ಶತಮಾನಗಳ ಹಿಂದೆಯೇ ಸುಂದರವಾದ ಮನೆಗಳನ್ನು ಕಟ್ಟಿಕೊಂಡು, ಸರಿಯಾದ ನೀರಿನ ವ್ಯವಸ್ಥೆಯನ್ನು ಮಾಡಿಕೊಂಡು, ತಮ್ಮ ಊರಿನ ನೈರ್ಮಲ್ಯವನ್ನು ಕಾಪಾಡಿಕೊಳ್ಳುವದನ್ನು ಅರಿತಿದ್ದವರ ನಾಗರಿಕತೆಯ ಹಿರಿಮೆ, ವೈಶಿಷ್ಟ್ಯ ಮತ್ತು ಪ್ರಗತಿಯನ್ನು ಚರಿತ್ರೆಕಾರರು ಒಪ್ಪಬೇಕಾಗಿದೆ. ಇಂದಿಗೂ ಆ ರೀತಿಯ ಪಟ್ಟಣ ರಚನಾಕ್ರಮವು ಬಹಳ ಕಡೆಗಳಲ್ಲಿ ಕಂಡುಬರುವದಿಲ್ಲ.

ಇವುಗಳಲ್ಲದೆ ಭಾರತದ ಅನೇಕ ಕಡೆಗಳಲ್ಲಿ ಬೌದ್ಧಸ್ತೂಪಗಳು ದೊರೆತಿವೆ. ಅವುಗಳ ಅಭ್ಯಾಸದಿಂದ ಬೌದ್ಧಮತವು ಕೆಲವು ಶತಮಾನಗಳ ವರೆಗೆ ಎಷ್ಟು ಪ್ರಭಾವಯುತವಾಗಿತ್ತೆಂಬುದು ತಿಳಿಯುತ್ತದೆ. ಇತ್ತೀಚಿಗೆ ರಾಂಚಿಯ ಪ್ರಸಿದ್ಧ ಪ್ರಾಚ್ಯ ಸಂಶೋಧಕರಾದ ರಾಯಬಹಾದ್ದೂರ ಶರತ್ ಚಂದ್ರರಾಯರವರು ಛೋಟಾನಾಗಪುರದಲ್ಲಿ, ರಾಂಚಿ ಮತ್ತು ಸಿಂಗಪುರ ಡಿಸ್ಟ್ರಿಕ್ಟಿನ ಹಳೇ ಊರಿನ ಸ್ಥಳದಲ್ಲಿ ಮತ್ತು ಸಮಾಧಿಗಳಲ್ಲಿ ದೊರೆತ ಕೆಲವು ವಸ್ತುಗಳ ಸಹಾಯದಿಂದ ಪುರಾತನ 'ಅಸುರರ ಸಂಸ್ಕೃತಿ'ಯನ್ನು ನಿಶ್ಚಯಿಸಿ

ಇದ್ದಾರೆ. ಮಣ್ಣಿನಿಂದ ಮಾಡಿದ ಹೂಜಿಗಳು, ಅವುಗಳ ಮೇಲಿನ ಚಿತ್ರಗಳು, ತಾಮ್ರ ಕಂಚು ಕಬ್ಬಿಣದಿಂದ ಮಾಡಿದ ಉಂಗುರಗಳು ಇವುಗಳ ಸಹಾಯದಿಂದ ಒಂದು ಯುಗದಿಂದ ಅಂದರೆ ಹೊಸ ಶಿಲಾಯುಗದಿಂದ ಕಬ್ಬಿಣ ಮತ್ತು ತಾಮ್ರ ಯುಗಗಳಿಗೆ ಆದ ಬದಲಾವಣೆಯನ್ನು ಸೂಚಿಸತಕ್ಕ ಆಧಾರಗಳು ದೊರೆತಿವೆ.

• ಅಲ್ಲದೆ, ಅಶೋಕನ ಶಿಲಾಶಾಸನಗಳು, ಬುದ್ಧನ ಸ್ಮಾರಕಗಳು, ಹೊಸ ಶಿಲಾಯುಗ ಕಾಲದ ಅವಶೇಷಗಳು ಇನ್ನೂ ದೊರೆಯುತ್ತಲೇ ಇವೆ. ಕಲಕತ್ತಾ ವಿಶ್ವವಿದ್ಯಾಲಯದ ಸಂಶೋಧನಕಾರರಾದ ಡಿ. ಸೇನರವರು ಸಿಂಗಭೂಂ ಡಿಸ್ಟ್ರಿಕ್ಟಿನ ಚಕ್ರಧಾರಪುರದಲ್ಲಿ ದೊರೆತ ಅವಶೇಷಗಳನ್ನು ಪರೀಕ್ಷಿಸಿ, ಆ ಸ್ಥಳವು ಹೊಸಶಿಲಾಯುಗ Neolithic Siteಕ್ಕೆ ಸಂಬಂಧಪಟ್ಟು ಬಹಳ ಅಮೂಲ್ಯವಾದುದು ಎಂದಿದ್ದಾರೆ. Hindu February 22 19 9. ಬುದ್ಧನ ಸ್ಮಾರಕಗಳು ಭಾರತದ ಆದ್ಯಂತವೂ ದೊರೆತಿವೆ. ಕೃಷ್ಣಾ ನದಿಯ ತೀರದಲ್ಲಿ (ಗುಂಟೂರು ಡಿಸ್ಟ್ರಿಕ್ಟಿನಲ್ಲಿ) ನಾಗಾರ್ಜುನಕೊಂಡದಲ್ಲಿ ಬುದ್ಧನ ಮತ್ತು ನಾಗಾರ್ಜುನ ಸನ್ಯಾಸಿಯ ದೈಹಿಕ ಅವಶೇಷಗಳೂ ಅನೇಕ ಚಿತ್ರಗಳಿಂದ ಕೂಡಿದ ಕಟ್ಟಡಗಳೂ ಸ್ಮಾರಕಗಳೂ ದೊರೆತಿವೆ. ಮತ್ತು ಕಾಂಚಿಪುರಕ್ಕೆ ೭ ಮೈಲು ದೂರದಲ್ಲಿರುವ ಮಾಮುಂದೂರು ಎಂಬಲ್ಲಿ ಕಲ್ಲು ಬಂಡೆಗಳಲ್ಲಿ ಕೆತ್ತಿದ ಅಶೋಕನ ಶಿಲಾಶಾಸನಗಳೂ ಗುಹಾಂತರ್ದೇವಾಲಯಗಳೂ ದೊರೆತಿವೆ. ಬೌದ್ಧಮತವು ದಕ್ಷಿಣದಲ್ಲಿ ಕಂಚಿಯ ವರೆಗೂ ವ್ಯಾಪಿಸಿತ್ತೆನ್ನಲು ಇವು ಆಧಾರಭೂತವಾಗಿವೆ.

ಮೈಸೂರ ದೇಶದ ಚಿತ್ರದುರ್ಗ ಡಿಸ್ಟ್ರಿಕ್ಟಿನಲ್ಲಿ ಚಂದ್ರವಳ್ಳಿಯಲ್ಲಿ ಸಂಶೋಧನಗಳು ಇನ್ನೂ ನಡೆಯುತ್ತಲೇ ಇವೆ. ಈಗಾಗಲೇ ಕದಂಬರ ಚರಿತ್ರೆಯ ಮೂಲಾಧಾರಗಳು ದೊರೆತಿವೆ. ಇಲ್ಲಿ ದೊರಕಿದ ಅನೇಕ ವಸ್ತುಗಳ ಪರೀಕ್ಷೆಯಿಂದ ದಕ್ಷಿಣದ ಮೂರು ಮುಖ್ಯ ನಾಗರಿಕತೆಗಳ ಚರಿತ್ರೆಯನ್ನು ಬರೆಯಲು ಸಹಾಯವಾಗುತ್ತದೆ. ಕ್ರಿ. ಪೂ. ೩ನೆಯ ಶತಮಾನದಲ್ಲಿ ಅಶೋಕನ ಪ್ರಜೆಗಳು ಮರಗಳಿಂದ ಕಟ್ಟಿದ ಮನೆಗಳಲ್ಲಿ ವಾಸಿಸುತ್ತಿದ್ದರೆಂದೂ ಬಿಲ್ಲು ಬಾಣ ಕತ್ತಿ ಗುರಾಣಿ ಇವುಗಳಿಂದ ಕೂಡಿದವರಾಗಿದ್ದ

ರೆಂದೂ ತಿಳಿದು ಬಂದಿದೆ. ಇದಲ್ಲದೆ ಕ್ರಿ. ಪೂ. ೧ನೆಯ ಶತಮಾನದಿಂದ ಕ್ರಿ. ಶ. ೨ನೆಯ ಶತಮಾನದ ವರೆಗೆ ಸಾತವಾಹನರು ದಕ್ಷಿಣದಲ್ಲಿ ತಮ್ಮ ಸಾಮ್ರಾಜ್ಯವನ್ನು ವಿಸ್ತರಿಸಿ, ಸಮುದ್ರದಾಚೆ ಹೇಗೆ ಸಂಪರ್ಕವಿಟ್ಟು ಕೊಂಡಿದ್ದರೆಂಬ ವಿಚಾರವಾಗಿಯೂ ಕೆಲವು ಅಂಶಗಳು ತಿಳಿದುಬಂದಿವೆ. ಇತ್ತೀಚೆಗೆ ಕೊಂಡಾಪುರದಲ್ಲಿ ಕೆಲವು ಪ್ರದೇಶಗಳ ಭೂಶೋಧನೆ ನಡೆದು ೪೦೦೦ ನಾಣ್ಯಗಳು ದೊರೆತಿವೆ. ಇವುಗಳನ್ನು ಹೊರತೆಗೆದ ಮ. ರಾ॰ ರಾ. ಕ್ವಾಜಾ ಮಹಮ್ಮದ ಅಹಮ್ಮದರವರು ಹೀಗೆ ಅಭಿಪ್ರಾಯಪಡುತ್ತಾರೆ. “ಸಾತವಾಹನರಿಗೂ ರೋಮನ್ನರಿಗೂ ವ್ಯಾಪಾರ ಸಂಪರ್ಕವಿದ್ದು ರೋಮನ್ನ ನಾಣ್ಯಗಳನ್ನುಸಾತವಾಹನರು ಅನುಕರಿಸಿರಬಹುದೆಂದು ಈ ನಾಣ್ಯಗಳ ಪರೀಕ್ಷೆಯಿಂದ ತರ್ಕಿಸಲು ಸಹಾಯವಾಗಿದೆ ಎಂದು. ಇದರಂತೆ ಪುರಚೇರಿಯ ಹತ್ತರ ‘ಅರಿಕಮೇಡು’ ಎಂಬಲ್ಲಿ ಕ್ರಿ. ಶ. ೧ನೆಯ ಶತಮಾನದಲ್ಲಿ ಈಜಿಪ್ತ ಮತ್ತು ಇಟಲಿಯವರು ವ್ಯಾಪಾರದ ಸರಕುಗಳನ್ನು ಬದಲಾಯಿಸುತ್ತಿದ್ದ ಒಂದು ಯವನರ ಫ್ಯಾಕ್ಟರಿಯ ಮೂಲವನ್ನು ಶೋಧಿಸಲು ಭಾರತ ಮತ್ತು ಫ್ರೆಂಚ ಸರಕಾರದವರು ತೊಡಗಿದ್ದಾರೆಂದು ಪ್ರಕಟಿತವಾಗಿತ್ತು. Mar 27, 1945 ಇವೆಲ್ಲಕ್ಕೂ ಅನುಕೂಲಿಸುವಂತೆ ಸಂಶೋಧನೆ ನಡೆಸಲು ಭಾರತ ಸರಕಾರದ ಪ್ರಾಚ್ಯ ಸಂಶೋಧನಾ ಇಲಾಖೆಯ ಡಾಯರೆಕ್ಟರ ಜನರಲ್‌ರವರಾದ ಡಾ. ವೀಲರರವರು ಚಿತ್ರದುರ್ಗದಲ್ಲಿ ಮೈಸೂರು ಸಂಶೋಧನಾ ಇಲಾಖೆಯವರು ನಡೆಸುತ್ತಿದ್ದ ಶೋಧನೆಗಳಲ್ಲಿ ಆಸಕ್ತಿಯನ್ನು ವಹಿಸಿದ್ದಾರೆ. ಇಲ್ಲಿಯ ಶೋಧನೆಗಳಲ್ಲಿ ನಮಗೆ ಚೆನ್ನಾಗಿ ತಿಳಿಯದಿರುವ ಚರಿತ್ರೆಯ Pre-historic ಮತ್ತು ಚರಿತ್ರೆಯ ಆದಿಭಾಗಕ್ಕೆ Early historic sites ಸಂಬಂಧಿಸಿದ ಪ್ರದೇಶಗಳ ಶೋಧನೆಯೇ ತಮ್ಮ ಗುರಿಯೆಂದು ಅವರು ತಿಳಿಸಿದ್ದಾರೆ. (Hindu July, 26, 1947.) ಈ ಕೆಲಸ ಯಶಸ್ವಿಯಾಗಿ ನಮ್ಮ ದೇಶದ ಚರಿತ್ರೆಯು ಉತ್ತಮವಾಗಲು ಅಡ್ಡಿಯಿಲ್ಲ.

ಇವೆಲ್ಲವುಗಳ ಸಮಾಲೋಚನೆಯಿಂದ ಇತಿಹಾಸದಲ್ಲಿ ಮುಂದುವರಿದ ಜನಾಂಗಗಳು ಅನೇಕ ಅಂತಸ್ತುಗಳನ್ನು ಪೂರೈಸಿದವೆಂದು ಸ್ಪಷ್ಟವಾಗುತ್ತದೆ. ಇತಿಹಾಸದಂತೆ ನಾಗರಿಕತೆಯ ಚರಿತ್ರೆಯನ್ನು ಪೂರ್ಣ ಬರೆಯಲು ಸಾಧ್ಯವಾಗಿಲ್ಲ. ಆದರೂ ಇಲ್ಲಿಯ ವರೆಗೆ ದೊರೆತ ಮುಖ್ಯ ಆಧಾರಗಳ

ಮೇಲೆ ನಾಗರಿಕತೆಯಲ್ಲಿ ಜನಾಂಗಗಳ ಅಂತಸ್ತನ್ನು ನಿಶ್ಚಯಿಸಬಹುದು. ಅವುಗಳು ಇತರ ಜನಾಂಗಗಳ ಮೇಲೆ ಹೇಗೆ ಪರಿಣಾಮವನ್ನುಂಟುಮಾಡಿದವೆಂಬುದನ್ನು ಕೂಡ ಗೊತ್ತು ಮಾಡುವುದು ಸಾಧ್ಯವು. ಈ ವಿಷಯದಲ್ಲಿ ಪಂಡಿತರ ಅಭಿಪ್ರಾಯಗಳು ಹೇಗೇ ಇರಲಿ, ಇದಕ್ಕೆ ಏಷ್ಯಾಖಂಡವು ತೌರುಮನೆ ಎಂಬುದನ್ನು ಸುಪ್ರಸಿದ್ಧ ಪಾಶ್ಚಾತ್ಯ ಇತಿಹಾಸಕಾರರು ಒಪ್ಪುತ್ತಾರೆ.

"Asia is a craddle of the human race, in Asia the first states were formed, and it is from Asia that Europe and Africa received their inhabitants."*

(ಏಶಿಯಾಖಂಡವು ಮಾನವ ಜನಾಂಗದ ತವರು ಮನೆ. ಏಶಿಯಾ ಖಂಡದಲ್ಲಿಯೇ ಮೊಟ್ಟ ಮೊದಲು ರಾಜ್ಯಗಳು ತಲೆಯೆತ್ತಿದವು. ಮತ್ತು ಯುರೋಪ ಮತ್ತು ಆಫ್ರಿಕಾ ಖಂಡಗಳ ಮೂಲ ನಿವಾಸಿಗಳು ಇದೇ ಏಶಿಯಾಖಂಡದಿಂದಲೇ ಬಂದವರಾಗಿದ್ದಾರೆ.)

ಹೀಗೆ ಅಭಿಪ್ರಾಯಪಡಲು ಕಾರಣಗಳಿವೆ. ಅವುಗಳನ್ನು ಬೇರೊಂದು ಕಡೆಗೆ ಪ್ರಸ್ತಾಪಿಸಲಾಗಿದೆ. ನಾಗರಿಕತೆಯ ಬೆಳವಣಿಗೆಯನ್ನು ತಿಳಿಯಲು ಪುರಾತನ ನಾಗರಿಕ ಜನಾಂಗಗಳು ಸಾಧಿಸಿದ ವೈಶಿಷ್ಟ್ಯಗಳನ್ನು ಸಂಕ್ಷೇಪವಾಗಿ ತಿಳಿಯುವದು ಅತ್ಯಾವಶ್ಯಕ. ಆ ಜನಾಂಗಗಳೆಲ್ಲವೂ ಯಾವ ರೀತಿಯಲ್ಲಿ ಜೀವನದ ಗಹನ ಸಮಸ್ಯೆಗಳನ್ನು ಎದುರಿಸಿದವೆಂಬದನ್ನು ತಿಳಿಯುವದರಿಂದ ಅವುಗಳ ಸಾಂಸ್ಕೃತಿಕ ಬೆಳವಣಿಗೆಯು ಗೋಚರವಾಗುತ್ತದೆ.

---

* Dr. Leonhard Schmitur—Manual of Ancient History Page 2.

## ೩ ನಾಗರಿಕತೆಯ ಮೂಲ

ಪುರಾತನ ನಾಗರಿಕತೆಗಳು ಎಲ್ಲವೂ ಒಂದೇ ಮಟ್ಟದಲ್ಲಿದ್ದವೆಂದು ನಿರ್ಧರಿಸಲು ಸಾಧ್ಯವಿಲ್ಲ. ಅಂತೆಯೇ ಪುರಾತನ ಚರಿತ್ರೆಯ ಬಗ್ಗೆಯೂ ಕೂಡ ಭಿನ್ನಾಭಿಪ್ರಾಯವಿದೆ. ಮನುಷ್ಯನು ಜನಿಸಿದಾರಭ್ಯ ಕ್ರಿ. ಶ. ೪೭೬ರಲ್ಲಿ ಪಾಶ್ಚಿಮಾತ್ಯ ಸಾಮ್ರಾಜ್ಯವು ನಶಿಸಿದ ವರೆಗಿನ ಕಾಲದ ಚರಿತ್ರೆ ಎಂದು ಕೆಲವರು ಅನ್ನುತ್ತಾರೆ. ಆದರೆ ಹಿಂದಿನ ಕಾಲದ ದೇಶಗಳಿಗೆಲ್ಲ ಮೇಲ್ಕಂಡ ಕಾಲವು ಅನ್ವಯಿಸುವದಿಲ್ಲ. ಯಾಕಂದರೆ ಜನಾಂಗಗಳು ಶಾಶ್ವತವಾಗಿ ನೆಲಿಸಿ, ದೇಶಗಳನ್ನು ಕಟ್ಟಿ, ನಾಗರಿಕ ಜೀವನವನ್ನು ನಡೆಸಿ ಕೊಂಡು ಬರಲು ಆರಂಭಿಸಿದುದು ಬಹಳ ಕಾಲದ ನಂತರ. ಸಮಕಾಲೀನ ಆಧಾರಗಳು ದೊರೆತಲ್ಲದೆ ಹಿಂದಿನ ಚರಿತ್ರೆಯನ್ನು ಬರೆಯಲು ಸಾಧ್ಯವಿಲ್ಲ. ಆದಕಾರಣ ನಮಗೆ ಇಂದಿನ ವರೆಗೆ ಗೊತ್ತಾಗಿದ್ದ ಜನಾಂಗಗಳ ನಾಗರಿಕ-ತೆಯು ಬಹುತರವಾಗಿ ಸಮಕಾಲೀನವಾದ ಜನಾಂಗಗಳ ಬರವಣಿಗೆಯ ಮೇಲಿಂದ.

ಬರೆವಣಿಗೆ ಮತ್ತು ಭಾಷೆ ಇವುಗಳು ಜನಾಂಗಗಳ ಪ್ರಗತಿಯನ್ನು ನಿಶ್ಚಯಿಸಲು ಸಾಧನಗಳು. ಬರೆವಣಿಗೆಯು ಅನುಷ್ಠಾನಕ್ಕೆ ಬಂದಾಗಿ ನಿಂದಲೂ ಕೆಲವು ವಿಷಯಗಳು ಶಾಶ್ವತವಾಗಿರಲು ಸಾಧ್ಯವಾಯಿತು. ಬರೆವಣಿಗೆಯ ಉಪಯೋಗವು ಪುರಾತನ ಜನಾಂಗಗಳಿಗೆಲ್ಲ ಒಂದೇ ಕಾಲ ದಲ್ಲಿ ತಿಳಿದಿರಲಿಲ್ಲ. ಏಷ್ಯಾದ ಜನಾಂಗದವರಿಗೂ ಈಜಿಪ್ತಿನವರಿಗೂ ಬರೆವಣಿಗೆಯು ಯುರೋಪಿನಲ್ಲಿ ಅದು ಪ್ರಚಾರಕ್ಕೆ ಬರುವ ಕೆಲವು ಶತಮಾನ ಗಳ ಹಿಂದೆಯೇ ಗೊತ್ತಿದ್ದಿತು. ಆದ್ದರಿಂದಲೇ ನಮಗೆ ಏಷ್ಯಾದ ಕೆಲವು ಜನಾಂಗಗಳ ವಿಚಾರವಾಗಿ ಆಧಾರಭೂತವಾದ ಬರೆವಣಿಗೆಗಳು ದೊರೆತಿವೆ. ಆ ಕಾಲದ ಯುರೋಪದ ವಿಷಯವಾಗಿ ಯಾವ ಆಧಾರಗಳೂ ದೊರೆತಿಲ್ಲ.

ಮೇಲ್ಕಂಡ ಆಧಾರಗಳ ಮೇಲಿಂದ ಏಷ್ಯಾಖಂಡವೇ ಪ್ರಪಂಚದ ಜನಾಂಗ ಗಳ ಜನ್ಮಭೂಮಿ, ನಾಗರಿಕತೆಗಳ ತೌರೂರು. ಇಲ್ಲಿಂದಲೇ ಜನರು ಇತರ ಖಂಡಗಳಿಗೆ ವಲಸೆ ಹೋದರು ಎಂಬ ವಿಷಯಗಳು ಚರಿತ್ರಾರ್ಹ ವಾಗಿವೆ. ಮತ್ತು ಏಷ್ಯಾ ಜನಾಂಗಗಳ ಚರಿತ್ರೆಯು ಯುರೋಪದ ಮತ್ತು ಇತರ ಜನಾಂಗಗಳ ಚರಿತ್ರೆಗಿಂತ ಪುರಾತನವಾದುದು ಎಂಬಂಶವೂ ಸ್ಥಿರ ಪಟ್ಟಿದೆ.

ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ, ನಾಗರಿತೆಯು ಕ್ರಮವಾಗಿ ಪ್ರಾರಂಭವಾದುದು ಅಲೆದಾಡುತ್ತಿದ್ದ ಪಶುಪಾಲಕರ ಗುಂಪಿನ ಜನರು ಬೇಸಾಯುಗಾರರಾಗಿ ನೆಲಸಿದ ನಂತರವೇ. ಹೀಗೆ ಅವರು ವ್ಯವಸಾಯ ವನ್ನು ಕೈಕೊಳ್ಳಲು ಫಲವತ್ತಾದ ನದೀ ಪ್ರದೇಶಗಳು ಅವರಿಗೆ ಆಶ್ರಯ ನೀಡಿದವು. ಆ ನದಿಗಳೆಂದರೆ ಈಗಿನ ಸಿಂಧು, ಗಂಗಾ, ನೈಲ, ಯಾಂಗ್ಸಿ ಕಿಯಾಂಗ, ಯುಫ್ರೆಟಿಸ್, ಟೈಗ್ರೀಸ ಮುಂತಾದ ಮಹಾನದಿಗಳೇ ಆದ್ದ ರಿಂದ ಹಿಂದೂ ದೇಶದಲ್ಲಿಯೂ ಮೆಸೊಪೋಟಾಮಿಯಾ ಮತ್ತು ಈಜಿಪ್ತಿ ನಲ್ಲಿಯೂ ಅಲೆದಾಡುತ್ತಿದ್ದ ಜನರು ಶಾಶ್ವತವಾಗಿ ಒಂದೆಡೆ ನೆಲೆಸಿ ವಿಶ್ವಕ್ಕೆ ಹಿರಿದಾದ ನಾಗರಿಕತೆಯನ್ನು ಬೆಳಿಸಿದರು. ಈ ಕಾರಣದಿಂದಲೇ ಏಷ್ಯಾ ಖಂಡವು ನಾಗರಿಕತೆಯ ಮೂಲವು ಎಂದು ಸ್ಥಿರಪಡುತ್ತದೆ.

ಪುರಾತನ ನಾಗರಿಕತೆಯು ಮೊದಲಾದುದು ಒಂದು ಕಾಲ. ಅದು ಮುಗಿದುದು ಒಂದು ಕಾಲ; ಎಂಬೀ ಮಾತು ಎಲ್ಲಕ್ಕೂ ಸಮಂಜಸವಾಗಿ ಅನ್ವಯಿಸುವದಿಲ್ಲ. ಕೂಲಂಕಷವಾಗಿ ವಿಮರ್ಶಿಸಿದಲ್ಲಿ ನಾಗರಿಕತೆಯು ಒಂದು ಕಾಲದಿಂದ ಇನ್ನೊಂದು ಕಾಲಕ್ಕೆ ಬದಲಿಸಿತೇ ಹೊರತು ಕೊನೆಗಾಣ ಲಿಲ್ಲ. ಅಳಿದು ಹೋದ ಒಂದು ಸಂತತಿಯವರ ಸಾಮ್ರಾಜ್ಯವನ್ನು, ಅವ ರಿಂದ ಕಲಿತ ಕೆಲವು ಕುಶಲ ವಿದ್ಯೆಗಳನ್ನು ತಮ್ಮದೇ ಆದ ಒಂದು ವೈಶಿಷ್ಟ ದಿಂದ ಮುಂದುವರಿಸಿದರೇ ಹೊರತು, ಜಯಶೀಲರಾದವರು ಎಲ್ಲವನ್ನೂ ಪ್ರತ್ಯೇಕವಾಗಿ ಪ್ರಾರಂಭಿಸಲಿಲ್ಲ. ಎಲ್ಲ ದೇಶಗಳಲ್ಲೂ ಜನಾಂಗಗಳು ಮುಂದುವರಿದ ರೀತಿಯೇ ಹೀಗೆ.

ಹಿಂದೆ ಸ್ಪಷ್ಟಪಡಿಸಿದಂತೆ ಏಷ್ಯಾಖಂಡವೇ ಜನಾಂಗಗಳ ಜನ್ಮ ಭೂಮಿ, ನಾಗರಿಕತೆಗಳ ತೌರೂರು. ಈ ಅಭಿಪ್ರಾಯವನ್ನು ಪುಷ್ಟೀಕರಿಸಲು ಬೇಕಾಗಿದೆ. ಆಧುನಿಕ ಪ್ರಪಂಚದಲ್ಲಿ ಯುರೋಪಿನ ಮತ್ತು ಏಷ್ಯಾ ಜನಾಂಗಗಳ ಭಾಷೆಗಳನ್ನು ಪರೀಕ್ಷಿಸಿದಲ್ಲಿ ಅವುಗಳಿಗಿರತಕ್ಕ ಸಾದೃಶ್ಯ ತಿಳಿಯಬರುತ್ತದೆ. ಬಹಳ ಹಿಂದಿನ ಕಾಲದಲ್ಲಿ ಏಷ್ಯಾಖಂಡದ ಕೆಲವು ಭಾಗಗಳಲ್ಲಿಯೂ ಯುರೋಪಿನ ಕೆಲವು ದೇಶಗಳಲ್ಲಿಯೂ ವಾಸಿಸುತ್ತಿದ್ದ ಜನರು ಒಂದೇ ಬುಡಕಟ್ಟಿಗೆ ಸೇರಿದವರೆಂತಲೂ ಕಾಲಕ್ರಮೇಣ ಅವರು ಆರ್ಥಿಕ ಕಾರಣಗಳಿಂದ ಇತರ ಕಡೆಗಳಿಗೆ ವಲಸೆಹೋಗಿ ನೆಲಸಿರಬೇಕೆಂದೂ ಚರಿತ್ರೆಕಾರರು ಅಭಿಪ್ರಾಯಪಡುತ್ತಾರೆ. ಅಂದಬಳಿಕ ಇಂದಿನ ಯುರೋಪಿನ ಪ್ರಮುಖ ಜನಾಂಗಗಳು ಮತ್ತು ಏಷ್ಯಾದ ಕೆಲವು ಜನಾಂಗಗಳು ಒಂದೇ ಬುಡಕಟ್ಟಿಗೆ ಸೇರಿದವರೆಂಬ ಸಿದ್ಧಾಂತಕ್ಕೆ ಪುಷ್ಟಿದೊರೆಯುತ್ತದೆ. ಈ ಬುಡಕಟ್ಟಿಗೆ ಸೇರಿದ ಜನರನ್ನು ಆರ್ಯರೆಂದು ಕರೆಯುತ್ತಾರೆ. ಇವರು ತಮ್ಮ ಅಪೂರ್ವ ಸಂಸ್ಕೃತಿಯಿಂದ ಇತಿಹಾಸ ಪ್ರಸಿದ್ಧರಾಗಿದ್ದಾರೆ.

ಈ ಸಂತತಿಗೆ ಸೇರಿದ ಜನರು ಹಿಂದುಸ್ಥಾನಕ್ಕೆ ಬರುವ ಮೊದಲು ಅನಾಗರಿಕರಾಗಿರದೆ ಪಶುಪಾಲನೆಯಲ್ಲಿ ನಿರತರಾಗಿದ್ದರು. ತಮ್ಮ ವೃತ್ತಿಗೆ ಅನುಕೂಲಿಸುವಂತೆ ಹುಲ್ಲು ಮತ್ತು ನೀರು ಇವುಗಳು ಸಮೃದ್ಧಿಯಾಗಿ ದೊರೆಯುವ ಪ್ರದೇಶಗಳನ್ನು ಹುಡುಕುತ್ತ ಸ್ಥಳದಿಂದ ಸ್ಥಳಕ್ಕೆ ಸಂಚರಿಸುತ್ತಿದ್ದರು. ಹೀಗೆ ಸಂಚರಿಸುತ್ತಿದ್ದ ಜನರು ಮಧ್ಯ ಏಷ್ಯಾದಲ್ಲಿದ್ದರೆಂತಲೂ ಕಾಸ್ಪಿಯನ್ ಸಮುದ್ರ ತೀರದ ಪಶ್ಚಿಮ ಪ್ರದೇಶವಾದ ಏಷ್ಯಾಮೈನರದಲ್ಲಿದ್ದರೆಂತಲೂ ಮೆಸೊಪೊಟೇಮಿಯಾ ಪ್ರದೇಶದಲ್ಲಿದ್ದರೆಂತಲೂ ಕೆಲವರು ಅಭಿಪ್ರಾಯ ಪಡುತ್ತಾರೆ. ಮತ್ತೆ ಕೆಲವರು ಆರ್ಮೆನಿಯಾ ಪ್ರಸ್ಥಭೂಮಿಯಲ್ಲಿದ್ದರೆಂದೆನ್ನುತ್ತಾರೆ. ಹೀಗೆ ಇವರ ಮೂಲ ನಿವಾಸಸ್ಥಾನವಾವುದೆಂಬುದರ ವಿಚಾರವಾಗಿ ಇತಿಹಾಸ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ.

ಸುಪ್ರಸಿದ್ಧ ಚರಿತ್ರೆಕಾರರೂ ವಿಜ್ಞಾನಿಗಳೂ ಆದ ಎಚ್. ಜಿ. ವೆಲ್ಸರವರು ವ್ಯವಸಾಯವೇ ನಾಗರಿಕತೆಯ ಮೂಲವೆಂದು ಅಭಿಪ್ರಾಯ

ಪಟ್ಟಿದ್ದಾರೆ. ಅಲೆದಾಡುತ್ತಿದ್ದ ಜನರ ಗುಂಪು ಶಾಶ್ವತವಾಗಿ ನೆಲೆಸಿ ವ್ಯವಸಾಯವನ್ನು ಉಪಕ್ರಮಿಸಿದ ನಂತರವೇ ಜೀವನದ ಇತರ ಅನುಕೂಲ್ಯ ಗಳನ್ನು ಅವರು ಕಲ್ಪಿಸಿಕೊಂಡರು. ಈ ರೀತಿಯಾಗಿ ವ್ಯವಸಾಯದಲ್ಲಿ ತೊಡಗಲು ಯುಫ್ರೆಟಿಸ್, ನೈಲ, ಸಿಂಧು, ಗಂಗಾ ಮೊದಲಾದ ಮಹಾ ನದಿಗಳು ಅವರಿಗೆ ಆಸರಕೊಟ್ಟವು. ಅಲ್ಲಿಯ ವರೆಗೂ ಅವರ ಅಲೆದಾಟವು ತಪ್ಪಿರಲಿಲ್ಲ. ಹೀಗೆ ಏಷ್ಯಾದ ಒಂದು ಕೇಂದ್ರಸ್ಥಾನದಿಂದ ಹೊರಟ ಜನ ರಿಗೆ ಸಮುದ್ರವು ಅಡ್ಡಿ ಮಾಡಿತೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಆದಕಾರಣ ಬರೆವಣಿಗೆ, ಭಾಷೆ ಇವುಗಳ ಸಹಾಯದಿಂದ ಸಂಬಂಧವನ್ನು ಕಂಡುಹಿಡಿಯಬಹುದು. ಬೋಘಿಸ್ಕಾಯನಲ್ಲಿ ದೊರೆತ ಶಾಸನದಿಂದ ವೇದಗಳ ಸಂಸ್ಕೃತಿಯು ಯುಫ್ರೆಟಿಸ್ ನದಿಯ ಕಣಿವೆಯ ವರೆಗೂ ವ್ಯಾಪಿ ಸಿತ್ತೆಂದು ವಿದಿತವಾಗುತ್ತದೆ.

ಕ್ರಮವಾಗಿ ಚರಿತ್ರೆಯನ್ನು ಬರೆಯಲು ಒಂದೇ ಆಧಾರವು ಸಾಲದು. ಅದು ಎಲ್ಲ ಜನಾಂಗಗಳಿಗೂ ಅನ್ವಯಿಸುವಂತೆ ದೊರೆಯುವದಿಲ್ಲ. ಚರಿ ತ್ರೆಯ ಅನೇಕ ಆಧಾರಗಳ ಮೇಲೆ ಬರೆಯಲ್ಪಟ್ಟಿದೆ. ಚರಿತ್ರೆಯ ಮೂಲ ಪುರುಷರು ನಾಗರಿಕತೆಯಲ್ಲಿ ಮುಂದುವರಿದಂತೆಲ್ಲ ಅವರ ಜೀವನದ ವೈವಿ ಧ್ಯತೆ ಹೆಚ್ಚಿತು. ಆದರೆ ಪುರಾತನ ಜನಾಂಗಗಳು ಮುಂದುವರಿದ ರೀತಿ ತಿಳಿಯಬೇಕಾದರೆ —ಅವರ ಬರೆವಣಿಗೆಯಂತೆ— ಅವರು ನಿರ್ಮಿಸಿದ ಕಟ್ಟಡ ಗಳು, ಕೆತ್ತಿದ ಶಾಸನಗಳು, ಚಿತ್ರಿಸಿದ ಮತ್ತು ಕೊರೆದ ಚಿತ್ರಗಳು, ಕಟ್ಟರತಕ್ಕ ಮನೆಗಳ ರಚನೆ, ದೇವಸ್ಥಾನಗಳು ಮತ್ತು ಸಮಾಧಿಗಳು ಹಾಗು ಸ್ಮಾರಕಗಳು ಇವೇ ಮೊದಲಾದವುಗಳ ಸಹಾಯದಿಂದ—ಹೆಗು ರುತುಗಳ ಸಾಧನದಿಂದ, ಜೀವನದ ಅಂತಸ್ತನ್ನು ತಿಳಿಯಲು ಸಾಧ್ಯ. ಆದುದ ರಿಂದಲೇ ಈಜಿಪ್ತಿನ ಜನಾಂಗದವರ ಜೀವನದ ಅಂತಸ್ತನ್ನು ಅವರ ಗೂಢ ಲಿಪಿಗಳಿಗಿಂತ Heiroglyphics ಮೊದಲೇ ಅವರ ಕಟ್ಟಡಗಳಿಂದ ತಿಳಿ ಯಲು ಸಾಧ್ಯವಾಯಿತು. ಈಜಿಪ್ತಿನಲ್ಲಿ ದೊರೆತಂಥ ಗೂಢಲಿಪಿಗಳು ಮೋಹಂಜೋದಾರೋ ಕಣಿವೆಗಳಲ್ಲಿಯೂ ದೊರೆತಿವೆ.

ಮೇಲೆ ವಿವರಿಸಿದ ಆಧಾರಗಳಿಂದ ಚರಿತ್ರೆಯು ಪೂರ್ಣಗೊಂಡಿಲ್ಲ. ಕೆಲವು ಭಾಗಗಳು ಪುರಾಣ ಐತಿಹ್ಯಗಳಿಂದ (Mythology or Legend)

and Tradition ಕೂಡಿಸಲ್ಪಟ್ಟಿವೆ. ಅಂಥವುಗಳನ್ನು ಜಾಗರೂಕತೆಯಿಂದ ನಂಬಬೇಕಾಗಿದೆ. ಆದರೂ ಅವುಗಳನ್ನು ಅಸತ್ಯವೆಂದು ದೂರೀಕರಿಸಲು ಅಥವಾ ತ್ಯಜಿಸಲು ಸಾಧ್ಯವಿಲ್ಲ. ಇಂದಿನ ಚರಿತ್ರೆಯಲ್ಲಿ ಕೆಲವು ನಿರ್ದಿಷ್ಟ ವಾದ ಆಧಾರಗಳ ಅಭಾವದಿಂದ ಅವುಗಳನ್ನು ಸೇರಿಸಿಕೊಳ್ಳಬೇಕಾಗಿದೆ. ಈ ಕೆಲವು ಆಧಾರಗಳ ಮೇಲೆ ಬರೆಯಲ್ಪಟ್ಟಿರತಕ್ಕ ಜನಾಂಗಗಳ ಪ್ರಾಚೀನ ಚರಿತ್ರೆಯಲ್ಲಿ, ಆಗಿನ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆ ಗಳೇ ಅವುಗಳ ಅಂತಸ್ತನ್ನು ನಿರ್ಧರಿಸಲು ಸಹಕಾರಿಗಳಾಗಿವೆ. ಅವೆಲ್ಲವುಗಳ ಚರಿತ್ರೆಯು ಪ್ರಾಚೀನ ಕಾಲಕ್ಕೆ ಸಂಬಂಧಪಟ್ಟುದಾದರೂ ಅವುಗಳ ನಾಗರಿಕ ಜನಾಂಗಗಳ ಶ್ರೇಣಿಯಲ್ಲಿ ಒಂದೇ ತರದ ಹಿರಿಮೆಗೆ ಅವು ಅರ್ಹ ವಾಗಿಲ್ಲ. ಒಂದು ಜನಾಂಗದ ನಾಗರಿಕತೆಯು ಅಂತಸ್ತಿಗೂ ಇನ್ನೊಂದಕ್ಕೂ ತಾರತಮ್ಯ ದೃಷ್ಟಿಯಿಂದ—ಅವುಗಳು ಸಾಧಿಸಿದ ಮಹತ್ಕಾರ್ಯಗಳಿಗನು ಸಾರವಾಗಿ, ಅವುಗಳ ಬುನಾದಿಗೆ ತಕ್ಕಂತೆ—ಪ್ರಾಧಾನ್ಯತೆಯು ಕೊಡಲ್ಪ ಟ್ಟಿದೆ. ಕೆಲವು ಆಡಳಿತ ವ್ಯವಸ್ಥೆ, ಭಾಷೆಯ ಉಪಯೋಗ, ಮತ್ತು ನಾಗರಿಕ ಸೌಲಭ್ಯಗಳನ್ನುಂಟುಮಾಡಿಕೊಂಡು—ಇತರ ಜನಾಂಗಗಳಿಗೆ ಮಾದರಿಯಾಗಿದ್ದವು; ಅವುಗಳ ಜೀವನದ ಮೇಲೆ ಪರಿಣಾಮವನ್ನುಂಟು ಮಾಡಿದುವು. ಆದಕಾರಣ ನಾಗರಿಕತೆಯ ಅಂತಸ್ತು ಈ ಕೆಲವು ಕಾರಣ ಗಳಿಂದಲೇ ನಿರ್ಧರಿಸಲ್ಪಟ್ಟಿದೆ. ಮುಂದಿನ ಅಧ್ಯಾಯದಲ್ಲಿ ಪ್ರಾಚೀನ ನಾಗರಿಕತೆಗಳನ್ನು ಸಂಕ್ಷೇಪವಾಗಿ ವಿಚಾರ ಮಾಡಲಾಗಿದೆ.



## ೪ ಪೌರ್ವಾತ್ಯ ನಾಗರಿಕ ಜನಾಂಗಗಳು

ಪುರಾತನ ಕಾಲದ ಚರಿತ್ರೆಗೆ ಸಂಬಂಧಪಟ್ಟ ಜನಾಂಗಗಳೆಲ್ಲವನ್ನೂ ಮುಖ್ಯವಾಗಿ ಮೂರು ಬುಡಕಟ್ಟೆಗೆ ಸೇರಿದವರೆಂದು ಕೆಲವು ಚರಿತ್ರಕಾರರು ನಿರ್ಧರಿಸಿದ್ದಾರೆ. ಆ ಮೂರೆಂದರೆ:— ೧ ಮಂಗೋಲಿಯಾ ಜನಾಂಗ. ೨ ಸೆಮಿಟಿಕ್ ಜನಾಂಗ ಮತ್ತು ೩. ಆರ್ಯರ ಜನಾಂಗ. ಮತ್ತೆ ಕೆಲವರು ೪ ಕಕೇಷಿಯನ್ ೫ ಆಸ್ಟ್ರೇಲಾಯಿಡ ೬ ನಿಗ್ರೋ ಎಂಬ ಮೂರು ಜನಾಂಗಗಳು ಸೇರಿ ಒಟ್ಟು ಜನಾಂಗಗಳನ್ನು ಆರು ಬಗೆಯಾಗಿ ವಿಂಗಡಿಸಿದ್ದಾರೆ. ಹೀಗೆ ವಿಂಗಡಿಸಲು ಇವರ ಬಣ್ಣ, ಶರೀರದ ಆಕಾರ, ಮೈಕಟ್ಟು, ಅಲ್ಲದೆ ಎಲ್ಲಕ್ಕಿಂತಲೂ ಮಿಗಿಲಾಗಿ ಇವರ ಜೀವನದ ರೀತಿಯೂ ಸಹಕಾರಿಯಾಗಿವೆ. ಮಂಗೋಲಿಯಾ ಜನರು ಹಳದೀ ಬಣ್ಣದವರಾಗಿಯೂ ಕಕೇಷಿಯನ್ ಜನಾಂಗದವರು ಬಿಳಿಯ ಬಣ್ಣದವರಾಗಿಯೂ ಮತ್ತು ನಿಗ್ರೋ ಜನರು ಕಪ್ಪು ಬಣ್ಣದವರಾಗಿಯೂ ಇದ್ದಾರೆ. ಈ ರೀತಿಯ ಆರು ಬಗೆಯ ಜನಾಂಗಗಳಲ್ಲಿ ಮೊದಲಿನ ಮೂರು ಸಂತತಿಗೆ ಸೇರಿದವರ ಚರಿತ್ರೆಯೇ ಮುಖ್ಯವಾದುದು. ಈ ಮೂರರಲ್ಲಿಯೂ ಸೆಮಿಟಿಕ್, ಆರ್ಯರ ಸಂತತಿಯವರೇ ಹೆಚ್ಚು ಜನರಿದ್ದಾರೆ. ಟೈಗ್ರಿಸ ನದಿಯಿಂದ ಕೆಂಪು ಸಮುದ್ರದ ವರೆಗಿನ ಪ್ರದೇಶದ ಜನರೆಲ್ಲರೂ ಸೆಮಿಟಿಕ್ ಸಂತತಿಗೆ ಸೇರಿದವರೆಂದು ನಿಶ್ಚಯಿಸಲಾಗಿದೆ. ಏಷ್ಯಾದಲ್ಲಿಯ ಇಂಡಿಯಾ ನಿವಾಸಿಗಳು, ಪಾರಸಿಕರು, ಯುರೋಪಿನ ಗ್ರೀಕರು, ರೋಮನರು, ಕೆಲ್ಟರು, ಸ್ಲಾವೋನಿಯನ್ನರು ಮತ್ತು ಅಥೀನಿಯಾದವರು ಆರ್ಯಸಂತತಿಗೆ ಸೇರಿದವರೆಂದು ಗೊತ್ತುಪಡಿಸಲಾಗಿದೆ. ಕಾರಣಾಂತರಗಳಿಂದ ಮೇಲ್ಕಂಡ ಸಂತತಿಗೆ ಸೇರಿದ ಜನರು ಬೇರೆ ಬೇರೆ ಕಡೆಗಳಲ್ಲಿ ನೆಲೆಸಿದ್ದಾರೆ. ಸಾವಿರಾರು ವರುಷಗಳ ವರೆಗೆ ಸೇಮಿಟಿಕ್ ಮತ್ತು ಆರ್ಯರ ಸಂತತಿಯವರೇ ಪ್ರಪಂಚದ ನಾಗರಿಕತೆಯನ್ನು ಅಭಿವೃದ್ಧಿಗೆ ತಂದಿದ್ದಾರೆ. ಕೆಲವು ವೇಳೆ ಇವುಗಳ

ಜೀವಮಾನದಲ್ಲಿ ಉನ್ನತಿ ಅವನತಿಗಳಾಗಿವೆ. ಪ್ರಪಂಚದ ಸಾಮ್ರಾಜ್ಯ ಕ್ಕಾಗಿ ಪರಸ್ಪರ ಹೋರಾಟಕ್ಕೆ ಯತ್ನಿಸಿವೆ. ಆದರೂ ಇವುಗಳ ಪರಸ್ಪರ ಪ್ರಭಾವದಿಂದ ಸತ್ಪರಿಣಾಮವುಂಟಾಗಿದೆ. ಇವೆರಡು ಜನಾಂಗಗಳಲ್ಲಿ ಸಾಮರ್ಥ್ಯ ಗುಣಗಳಲ್ಲಿ ವ್ಯತ್ಯಾಸಗಳೇನೋ ಇದ್ದವು. ಸೇಮಿಟಿಕ್ ಜನಾಂಗದವರು ತೀಕ್ಷ್ಣಬುದ್ಧಿಯುಳ್ಳವರೂ ಧೈರ್ಯಶಾಲಿಗಳೂ ಸಾಹಸಿ ಗಳೂ ಕಾರ್ಯತತ್ಪರರೂ ತಮ್ಮ ಆಸ್ತಿಪಾಸ್ತಿ ಸ್ವಾಸ್ಥ್ಯಗಳಲ್ಲಿ ಮಮತೆ ಯುಳ್ಳವರೂ ಒಬ್ಬನೇ ದೇವರಲ್ಲಿ ಅಚಲವಾದ ನಂಬಿಕೆಯುಳ್ಳವರೂ ಆಗಿದ್ದರು. ಆರ್ಯರ ಸಂತತಿಗೆ ಸೇರಿದವರು ಭಿನ್ನ ಭಿನ್ನ ಅಂತಸ್ತಿನ ನಾಗರಿಕತೆಯು ಜನರನ್ನೊಳಗೊಂಡು, ವಿವಿಧ ಶಕ್ತಿ ಸಾಮರ್ಥ್ಯಗಳಿಂದ ಕೂಡಿದವರಾಗಿದ್ದರು. ಆದರೆ ಅವರಲ್ಲಿ ಮುಂದುವರಿದವರು ಸೇಮಿಟಿಕ್ ಸಂತತಿಯವರಿಗಿಂತ ವಿಚಾರಪೂರಿತರೂ ಶಾಂತಚಿತ್ತರೂ ಮತ್ತು ದೂರ ದೃಷ್ಟಿಯುಳ್ಳವರೂ ಆಗಿದ್ದರು. ಸಂಘಟನಾಶಕ್ತಿ, ಸಾಹಿತ್ಯ ಮತ್ತು ಲಲಿತ ಕಲೆಗಳಲ್ಲಿ ಅವರು ಅಸಾಧಾರಣ ಬುದ್ಧಿ ಶಕ್ತಿಯನ್ನು ತೋರಿಸಿದರು. ಆದರೆ ಮತದ ವಿಚಾರದಲ್ಲಿ ಮಾತ್ರ ಇವರು ಸೇಮಿಟಿಕ್ ಜನಾಂಗದವರಷ್ಟು ಮುಂದುವರಿದಿರಲಿಲ್ಲ. ಅವರ ಪದ್ಧತಿಗಳನ್ನು ಇವರು ಅವಲಂಬಿಸಿ ಅವರಿ ಗಿಂತಲೂ ಹೆಚ್ಚಿನ ಪ್ರಾವೀಣ್ಯತೆಯನ್ನು ಪಡೆದರು. ಕಾಲಕ್ರಮೇಣ ಆರ್ಯ ಸಂತತಿಗೆ ಸೇರಿದವರು Indo-European family of Nations ಎಲ್ಲ ವಿಷಯಗಳಲ್ಲೂ ಆದರ್ಶಪ್ರಾಯರಾದರು.

ಮೇಲೆ ವಿವರಿಸಿದ ಜನಾಂಗಗಳ ಮೂಲಪುರುಷರು ಯಾವ ಭಾಗ ದಲ್ಲಿ ನೆಲೆಸಿದ್ದರೆಂಬುದನ್ನು ನಿಶ್ಚಿತವಾಗಿ ನಿರ್ಧರಿಸಲು ಸಾಧ್ಯವಾಗಿಲ್ಲ. ಏಷ್ಯಾಖಂಡದಿಂದ ಕಾಲಕ್ರಮೇಣ ಯುರೋಪ ಮತ್ತು ಆಫ್ರಿಕಾಖಂಡ ಗಳಿಗೆ ಇವರು ಸಂಚರಿಸಿದರೆಂದು ಮಾತ್ರ ಸ್ಪಷ್ಟಪಡಿಸಲಾಗಿದೆ.

ಆದಿಯಿಂದಲೂ ಬಲಿಷ್ಠ ಜನಾಂಗದವರು ಬಲಹೀನರನ್ನು ಸೋಲಿಸಿ ಅವರ ಮೇಲೆ ಆಡಳಿತವನ್ನು ನಡೆಸಿರುವದು ಚರಿತ್ರಾರ್ಹವಾದ ಸಂಗತಿ ಯಾಗಿದೆ. ಜೀವನದ ಹೋರಾಟದಲ್ಲಿ ನಿರ್ಬಲರು ಅಥವಾ ಹೆಚ್ಚಿನ ಪಾಶವಿಕ ಶಕ್ತಿಯಿಲ್ಲದವರು ಬಲಿಷ್ಠರಿಗೆ ಶರಣಾಗತರಾಗಿದ್ದಾರೆ. ಅವರ

ಕರುಣೆಗೂ ಪ್ರೋಷಣೆಗೂ ಒಳಗಾಗಿದ್ದಾರೆ. ಜೀವನದ ಹೋರಾಟದಲ್ಲಿ ಬಲಿಷ್ಠ ಬಾಳಿನ ಗೆಲವೇ ಒಂದು ಸಿದ್ಧಾಂತವೆಂದು ಡಾರ್ವಿನ್‌ನೆಂಬ ವೈಜ್ಞಾನಿಕನು ಪ್ರತಿಪಾದಿಸಿದ್ದಾನೆ. ಈ ಸಿದ್ಧಾಂತವು Theory of the survival of the fittest ಎಂದು ಇತಿಹಾಸ ಪ್ರಸಿದ್ಧವಾಗಿದೆ. ಅಲ್ಲದೆ ಆ ವೈಜ್ಞಾನಿಕನ ವಿಶ್ವಾಸ ತತ್ವವು Evolution theory ಮನುಷ್ಯ ವರ್ಗವು ರೂಪಾಂತರ ಹೊಂದಿದ ರೀತಿಯನ್ನು ತಿಳಿಯಲು ಸಹಕಾರಿಯಾಗಿದೆ. ಜೀವನದ ರೀತಿನೀತಿಯ ಬೆಳವಣಿಗೆಯು ಕೂಡ ಕ್ರಮೇಣ ಉಂಟಾಯಿತು. ಆದಕಾರಣ ಆಡಳಿತ ಪದ್ಧತಿಯಲ್ಲೂ ಪೌರ್ವಾತ್ಯ ಪಾಶ್ಚಾತ್ಯ ದೇಶಗಳಿಗೆ ಅಂತರವಿದೆ. ಒಂದು ಸಂಸಾರದ ಆಡಳಿತದಂತೆಯೇ ಒಂದು ದೇಶದ ಆಡಳಿತವೂ ಮಾರ್ಪಾಟಾಯಿತು. ಮನೆಗೆ ತಂದೆಯು ಯಜಮಾನನಾಗಿ ಇತರರು ಆತನಿಗೆ ಆಧೀನರಾಗಿರುತ್ತಿದ್ದರು. ಈ ರೀತಿಯ ಸಂಸಾರ ವ್ಯವಸ್ಥಾ ಕ್ರಮಕ್ಕೆ Patriarchal family ಪಿತೃವಂಶಿಕ ಪದ್ಧತಿ ಎಂದು ಹೆಸರಾಯಿತು. ಈ ಪದ್ಧತಿ ಏಷ್ಯಾದಲ್ಲಿ ಬಳಕೆ ಬಂದಿತು. ಅಲ್ಲದೆ ನಿರಂಕುಶಾಧಿಕಾರದ ಪದ್ಧತಿಯು Despotic Rule ಬೆಳೆಯಿತು. ಗುಂಪು ಕಟ್ಟಿಕೊಂಡು ಆರ್ಥಿಕ ಸಮಸ್ಯೆಯನ್ನು ಬಗೆಹರಿಸಲೆಂದು ಸಂಚರಿಸುತ್ತಿದ್ದ ಪ್ರತಿಯೊಂದು ಗುಂಪಿಗೂ ಒಬ್ಬ ಮುಖ್ಯಸ್ಥನಿರುತ್ತಿದ್ದನು. ಎಲ್ಲರೂ ಆತನ ಅಧಿಕಾರಕ್ಕೆ ಒಳಗಾಗಿರಬೇಕಾಗಿದ್ದಿತು. ಸೋಲಿಸಲ್ಪಟ್ಟ ಜನಾಂಗದವರು ಕೂಡ ಇವರಿಗೆ ಆಧೀನರಾಗಿರುತ್ತಿದ್ದರು. ಈ ರೀತಿಯಲ್ಲಿ ಏಷ್ಯಾದ ಜನಾಂಗಗಳಲ್ಲಿ ಸಾಮಾಜಿಕ ರಾಜಕೀಯ ಬೆಳವಣಿಗೆಯುಂಟಾಯಿತು. ಕೆಲವು ಚರಿತ್ರಕಾರರು ಏಷ್ಯಾಖಂಡದ ಜನಾಂಗಗಳಿಗೆ ರಾಜಕೀಯ ಸ್ವಾತಂತ್ರ್ಯದ ಬೆಲೆಯ ಅರಿವಿರಲಿಲ್ಲವೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ವೇದ ಮತ್ತು ಸ್ಮೃತಿ ಇವುಗಳಿಂದ, ನಮ್ಮವರು ಎಷ್ಟು ಮುಂದುವರಿದಿದ್ದಾರೆಂಬದು ನಿದರ್ಶನಕ್ಕೆ ಬರುವಂತಿದೆ.

ಪೌರ್ವಾತ್ಯ ಜನಾಂಗಗಳ ನಾಗರಿಕತೆಯಲ್ಲಿ ಇನ್ನೊಂದು ವಿಶೇಷವಿದೆ. ಪೌರ್ವಾತ್ಯರಲ್ಲಿ ಜಾತಿ ಪದ್ಧತಿಗಳು ಪ್ರಬಲವಾಗಿ ಬೆಳೆದು ವಂಶಪಾರಂಪರ್ಯವಾಗಿ ಅನುಷ್ಠಾನಕ್ಕೆ ಬಂದವು. ಆಡಳಿತದಲ್ಲಿ ಕೂಡ ಜಾತಿಯ

ಪದ್ಧತಿಯು ಆಳುವ ಸಂತತಿಯವರ ಬಲದಿಂದ ಬಂದಿತು. ಕೆಲವು ಕಾಲ ಜಯಶೀಲರಾದ ಜಾತಿಯವರೇ ಆಳಿದರು. ಆಡಳಿತ ಪದ್ಧತಿಯಲ್ಲೂ ಹೀಗೆ ನ್ಯೂನತೆಗಳುಂಟಾದುವು.

---

## ೫ ಪುರಾತನ ನಾಗರಿಕ ದೇಶಗಳು

ಪ್ರಪಂಚದ ವಿವಿಧ ಕಡೆಗಳಲ್ಲಿ ನೆಲೆಸಿದ ಮೂರು ಮುಖ್ಯ ಸಂತತಿಯವರು ನಾಗರಿಕತೆಯ ಚರಿತ್ರೆಯಲ್ಲಿ ಪ್ರಾಮುಖ್ಯರಾದವರೆಂದು ಹಿಂದಿನ ಅಧ್ಯಾಯದಲ್ಲಿ ಹೇಳಿದ್ದಾಗಿದೆ. ಅವರು ಯಾರು ? ಎಲ್ಲಿ ನೆಲೆಸಿದರು ? ಏನನ್ನು ಸಾಧಿಸಿದರು ? ಎಂಬ ಅಂಶಗಳನ್ನು ಸಂಕ್ಷೇಪವಾಗಿ ಈ ಕೆಳಗೆ ವಿವರಿಸಲಾಗಿದೆ. ಆ ದೇಶಗಳ ಹಾಗು ಅಲ್ಲಿ ನೆಲೆಸಿದ್ದ ಜನರ ಚರಿತ್ರೆಯೇ ಆಗಲಿ ಅಥವಾ ಅವರ ಸಂಸ್ಕೃತಿಯಾಗಲಿ ಸಂಕ್ಷೇಪವಾಗಿ ಮುಗಿಯಲಿಲ್ಲ. ಪ್ರಾಚೀನ ಕಾಲದ ಪ್ರತಿಯೊಂದು ದೇಶದ ಚರಿತ್ರೆಯೂ ಪ್ರತ್ಯೇಕವಾಗಿ ಬರೆಯಲ್ಪಟ್ಟಿರುತ್ತದೆ. ಈ ಸಣ್ಣ ಕೈಪಿಡಿಯಲ್ಲಿ ಪ್ರಾಚೀನ ಏಷ್ಯಾಖಂಡದಲ್ಲಿ ನೆಲೆಸಿ ನಾಗರಿಕತೆಯಲ್ಲಿ ಮುಂದುವರಿದ ಕೆಲವು ಜನಾಂಗಗಳ ಚರಿತ್ರೆಯನ್ನು ಹೆಚ್ಚಾಗಿ ವಿವರಿಸಿದೆ. ಸಂಕ್ಷೇಪವಾಗಿ ಅವುಗಳ ಸ್ಥಾನವನ್ನು ನಿಶ್ಚಯಿಸಲು ಯತ್ನಿಸಲಾಗಿದೆ.

**ಚೀಣಾದೇಶ:** — ಏಷ್ಯಾಖಂಡದಲ್ಲಿ ಬಹಳ ವಿಸ್ತೀರ್ಣವಾದ ಚೀಣಾದೇಶದ ನಾಗರಿಕತೆಯು ಬಹಳ ಪುರಾತನವಾದದ್ದು. ಮಂಗೋಲಿಯಾ ಜನರ ಬುಡಕಟ್ಟಿಗೆ ಸೇರಿದವರಲ್ಲಿ ನಾಗರಿಕರೆನಿಸಿಕೊಂಡವರೇ ಚೀಣಾದೇಶದವರು. ಅವರ ನಾಗರಿಕತೆಯು ವಿಶ್ವದ ಇತರ ದೇಶಗಳಲ್ಲಿ ವ್ಯಾಪಿಸಲಿಲ್ಲ. ಆ ದೇಶವನ್ನು ಗೆದ್ದವರು ಕೂಡ ತಮ್ಮ ನಾಗರಿಕತೆಯನ್ನು ಚೀಣಾದೇಶದಲ್ಲಿ ಪ್ರಚಾರಕ್ಕೆ ತರಲು ಶಕ್ತರಾಗಲಿಲ್ಲ. ಅವರು ಕೂಡ

ಸೋಲಿಸಲ್ಪಟ್ಟರು. ಅಲ್ಲದೆ ಆ ದೇಶದ ನಾಗರಿಕತೆಯನ್ನೇ ಅವಲಂಬಿಸಿದರು. ಯಾಕಂದರೆ ಗೆದ್ದವರು ಕೇವಲ ಪಾಶವೀಬಲದಲ್ಲಿ ಸಮರ್ಥರಾಗಿದ್ದರೇ ಹೊರತು ಸಂಸ್ಕೃತಿಯಲ್ಲಿ ಪ್ರವೀಣರಾಗಿರಲಿಲ್ಲ.

ಹೀಗಿದ್ದರೂ ಏಷ್ಯಾಖಂಡದ ಪ್ರಾಚೀನ ನಾಗರಿಕತೆಯನ್ನು ವಿಮರ್ಶಿಸುವಾಗ ಭಾರತಕ್ಕೂ ಚೀಣಾಕ್ಕೂ ಇದ್ದ ಸಾಂಸ್ಕೃತಿಕ ಸಂಬಂಧವು ಗಮನಾರ್ಹವಾಗಿದೆ. ಈ ಸಂಬಂಧ ಎಂದು ಆರಂಭವಾಯಿತೆಂಬುದು ಸ್ಥಿರಪಟ್ಟಿಲ್ಲ. ಆದರೆ ಮನುಸಂಹಿತೆಯ ಪ್ರಕಾರ ಚೀಣೀಯರು ಕೀಳ ಕ್ಷತ್ರಿಯರಾಗಿದ್ದು ಆಸಾಮದ ಧೊರೆಯಾದ ಭಗದತ್ತನ ಪಕ್ಷವಹಿಸಿ, ಕುರುಕ್ಷೇತ್ರ ಯುದ್ಧದಲ್ಲಿ ಪಾಂಡವರ ಸಂಗಡ ಯುದ್ಧಮಾಡಿದರೆಂದು ಪ್ರತೀತಿ ಇದೆ. ಇದಾದ ನಂತರ ಅಶೋಕ ಚಕ್ರವರ್ತಿಯ ಕಾಲದಲ್ಲಿ ಹೆಚ್ಚಿನ ಸಂಪರ್ಕ ವುಂಟಾಯಿತೆಂದು ತಿಳಿದು ಬಂದಿದೆ. ಅಶೋಕನು ಕ್ರಿ. ಪೂ. ೨೧೮ರಲ್ಲಿ ೧೮ ಜನ ಮತಪ್ರಚಾರಕರನ್ನು ಚೀಣಾಕ್ಕೆ ಕಳಿಸಿದನೆಂದೂ ಆನಂತರ ಅಲ್ಲಿಂದಲೂ ಈ ದೇಶಕ್ಕೆ ಅನೇಕ ಚೀಣರು ಯಾತ್ರಾರ್ಥಿಗಳಾಗಿ ಬರುತ್ತಿದ್ದರೆಂದೂ ತಿಳಿದು ಬಂದಿದೆ. ಹೀಗೆ ಭಾರತಕ್ಕೆ ಮತದ ಸಲುವಾಗಿ ಬಂದ ವಿದ್ವಾಂಸರ ಪ್ರವಾಸದ ಪರಿಣಾಮವಾಗಿ ಮತದ ಮತ್ತು ತತ್ವಗಳ ವಿಷಯದಲ್ಲಿ ಅವರಿಗೆ ವಿಶೇಷ ಪರಿಶ್ರಮ ಹೊಂದಲು ಸಹಕಾರಿಯಾಯಿತು. ಈ ಜ್ಞಾನಾರ್ಜನೆಯ ಪ್ರಭಾವವನ್ನು ಅವರು ತಮ್ಮ ಸಾಹಿತ್ಯದಲ್ಲಿ ಬೀರಿದ್ದಾರೆ. ಬೌದ್ಧ ಸಾಹಿತ್ಯದ ಮೂಲಗಳಲ್ಲಿ ಕೆಲವು ಚೀಣಾದಲ್ಲಿ ದೊರೆತಿವೆ. ಈ ರೀತಿಯ ಸಂಪರ್ಕದಿಂದ ಚೀಣಾದ ಕಲೆ, ಮತ ಮತ್ತು ಸಾಹಿತ್ಯ ಇವುಗಳ ಮೇಲೆ ಭಾರತದ ಪ್ರಬಲವಾದ ಪರಿಣಾಮವಾಯಿತು. ಬೌದ್ಧ ಮತವು ಚೀಣಾದಿಂದ ಕೋರಿಯಾ ಮತ್ತು ಜಪಾನ ದೇಶಗಳಿಗೂ ಹರಡಿತು. ಇಂದಿಗೂ ಬೌದ್ಧಮತಾನುಯಾಯಿಗಳು ಅನೇಕರು ಅಲ್ಲಿ ನೆಲೆಸಿದ್ದಾರೆ.

ಚೀಣಾದಿಂದ ಇಂಡಿಯಾಕ್ಕೆ ಬಂದವರಲ್ಲಿ ಕ್ರಿ. ಶ. ೫ನೆಯ ಶತಮಾನದಲ್ಲಿ 'ಫಾಹಿಯಾನ'ನೆಂಬವನೂ ಮುಂದೆ ೭ನೆಯ ಶತಮಾನದಲ್ಲಿ ಹ್ಯೂ ಅನ್ ಟ್ಸ್ಯಾಂಗನೆಂಬಾತನೂ ಮುಖ್ಯರು. ಈ ಇಂಡಿಯಾದ ಚರಿತ್ರೆ

ಯನ್ನು ಬರೆಯಲು ಈ ಯಾತ್ರಾರ್ಥಿಗಳ ಬರವಣಿಗೆಗಳು ಆ ಕಾಲದ ಮುಖ್ಯ ಆಧಾರಗಳಾಗಿವೆ.

ಚೀಣೀಯರು ಬಹಳ ಹಿಂದಿನ ಕಾಲದಲ್ಲಿಯೇ ಸಾಹಿತ್ಯ ವಿಜ್ಞಾನ ಸಮಾಜ ವ್ಯವಸ್ಥೆ, ಕುಶಲವಿದ್ಯೆ, ಇವುಗಳಲ್ಲಿ ಪ್ರವೀಣರಾಗಿದ್ದರು. ಅವರು ದಿಕ್ಸೂಚಿ, ಕೋವಿಯ ಮದ್ದು, ಮುದ್ರಣ ಯಂತ್ರ, ಇವುಗಳನ್ನು ಕಂಡು ಹಿಡಿದಿದ್ದರು. ಆದರೆ ಪಾಶ್ಚಾತ್ಯ ಜನರಂತೆ ಅದ್ಭುತ ಬದಲಾವಣೆಗಾಗಿ ಅವುಗಳನ್ನು ಉಪಯೋಗಿಸುವಷ್ಟು ಅವರು ಚತುರರಾಗಲಿಲ್ಲ.

ಚೀಣಾದೇಶದ ಜನರಿಗೆ ಬರವಣಿಗೆಯು ಗೊತ್ತಿದ್ದಿತು. ಅದರಲ್ಲಿ ಭಿನ್ನ ಅರ್ಥ ಬರುವಂತಹ ಒಂದೇ ಶಬ್ದವನ್ನು ಅನೇಕಾವರ್ತಿ ಉಪಯೋಗಿ ಸುತ್ತಾರೆಂದೂ ಆದ್ದರಿಂದಲೇ ಅವರ ಸಾಹಿತ್ಯವು ಇತರ ದೇಶದ ಸಾಹಿತ್ಯ ದಂತೆ ವಿಸ್ತಾರವಾಗಿ ಬೆಳೆಯಲಿಲ್ಲವೆಂದು ಕೆಲವರು ಅಭಿಪ್ರಾಯಪಡು ತ್ತಾರೆ. ಇವರ ಬರವಣಿಗೆಯು ಮೇಲಿನಿಂದ ಕೆಳಕ್ಕೆ ಬರೆಯುವಂತಹದು.

ಚೀಣೀಯರ ಚರಿತ್ರೆಯಲ್ಲಿ ಇಬ್ಬರು ಮಹಾವ್ಯಕ್ತಿಗಳು, 'ಕಾನ್‌ಫ್ಯೂ ಷಿಯಸ್' ಮತ್ತು ಲಿಯೋಟ್ಸೆ Confucius and Loothe ಎಂಬವರು. ಅವರು ಆ ಜನರ ಜೀವನದಲ್ಲಿ ಉಂಟುಮಾಡಿದ ಮಹತ್ತರವಾದ ಬದ ಲಾವಣೆಗಳು ಅಥವಾ ಪರಿಣಾಮಗಳು ವಿಶೇಷಸ್ಥಾನವನ್ನು ಪಡೆದಿವೆ. ಈ ಇಬ್ಬರು ಕ್ರಿ. ಪೂ. ೬ನೆಯ ಶತಮಾನದಲ್ಲಿ ಜೀವಿಸಿದ್ದರೆಂದು ತಿಳಿದು ಬಂದಿದೆ. ಕಾನ್‌ಫ್ಯೂಷಿಯಸ್‌ನನ್ನು ಭಾರತದಲ್ಲಿ ಜನಿಸಿದ ಬುದ್ಧದೇವ, ಪಾಲಿಸ್ತೈನಿನ ಜೆರೆಮಯ್, ಪರ್ಶಿಯದ ಝೋರಾಸ್ಟರ ಮುಂತಾದ ಸಮ ಕಾಲೀನರೆಂದು ಪರಿಗಣಿಸಲ್ಪಟ್ಟಿರುವ ಮಾರ್ಗದರ್ಶಕರ ಶ್ರೇಣಿಯಲ್ಲಿ ಸೇರಿಸ ಬಹುದು. ಈತನು ಮತಸ್ಥಾಪಕನೂ ಅಲ್ಲ, ಸುಧಾರಕನೂ ಅಲ್ಲ, ಚೀಣೀ ಯರ ಜೀವನದ ರೀತಿನೀತಿಗಳಲ್ಲಿ ಉಂಟುಮಾಡಿದ ಬದಲಾವಣೆಗಾಗಿ ಶ್ರೇಷ್ಠತೆಯನ್ನು ಪಡೆದಿದ್ದಾನೆ. ಅವರ ನೈತಿಕ ಮತ್ತು ರಾಜಕೀಯ ವ್ಯವಸ್ಥೆಯು ಆತನಿಂದಲೇ ಉತ್ತಮಗೊಂಡಿತೆಂದು ಉಲ್ಲೇಖಿತವಾಗಿದೆ. ಅವನು ಹೊಸದಾಗಿ ಯಾವ ತತ್ವವನ್ನೂ ಮತವನ್ನೂ ಬಳಕೆಯಲ್ಲಿ ತರದೆ, ಆ ಜನರ ಪುರಾತನ ಗ್ರಂಥಗಳಲ್ಲಿ ಉಲ್ಲೇಖಿತವಾಗಿದ್ದ ಜೀವನದ ಉದಾತ

ತತ್ವಗಳನ್ನು ಸಂಗ್ರಹಿಸಿದನು. ಜೀವನದ ನೀತಿಯೇ ನ್ಯಾಯಕ್ಕೆ ಸಮನ್ವಯ ವಾಗಿದ್ದಿತು. ಈ ರೀತಿ ಸಂಘಟಿತವಾದ ಸಮಾಜವು ನ್ಯಾಯವನ್ನಾಗಲಿ ನೀತಿಯನ್ನಾಗಲಿ ಮೀರುವಂತಿರಲಿಲ್ಲ. ಆದ್ದರಿಂದ ಅವರಲ್ಲಿ ಕ್ರೂರಕರ್ಮ ಗಳಾಗಲಿ ನೀತಿಬಾಹಿರವಾದ ಕಾರ್ಯಗಳಾಗಲಿ, ನಡೆಯಲು ಅವಕಾಶ ವಿರಲಿಲ್ಲ. ಡಾ. ಎಂ. ಆರ್. ಶರತ್‌ರಾಯ್, ಪಿ. ಎಚ್ ಡಿ. ಡಿ. ಲಿಟ್ ರವರು ಅದನ್ನು ಈ ರೀತಿ ವರ್ಣಿಸಿದ್ದಾರೆ:—

Confucius did not formulate a new religion nor did he try to reform the old. His chief work was to gather all that was best of the old and preserve them...........He abolished crime in the whole province, not by punishment but by teaching and regulating the lives of the people. He made law-courts and police superfluous by giving each class and community and each man the necessary knowledge to police his own actions. There was some thing more wonderful than religion. No religion has yet stopped crime, but the code of Confucius contained in the five kings and four shw, that still regulate the minutest details of chinese life did it.*

ಇದಲ್ಲದೆ ದೇವರು ಮತ್ತು ಮತ-ನೀತಿ, ಇವುಗಳ ವಿಚಾರವಾಗಿ ಈ ವ್ಯಕ್ತಿಯ ಪ್ರಭಾವವು ಎಷ್ಟಿರುವದೆಂಬುದನ್ನು ತಿಳಿಸಲು ಈ ಕೆಳಗಿನ ವಾಕ್ಯಗಳನ್ನು ಕೊಡಲಾಗಿದೆ.

"If for nothing else, for three facts Confucius will remain ever remarkable. He did not look for new thrusts and new paths along which to lead men's intellect, but he delved into the old to preserve them and give them new life. He considered man before god and not god before man. He

*—The Kaiser-i-Hind-Illustrated weekly Jan, 15, 1939

made religion dependent on Ethics and not Ethics dependent on religion. These are all just the very opposite of what the great philosphers and thinkers of other countries did.''

(By the same scholar)

ಕಾನ್‌ಫ್ಯೂಷಿಯಸ್‌ನು ಚುಂಗಟಿ ನಗರದ ಮುಖ್ಯ ನ್ಯಾಯಾಧೀಶನಾಗಿದ್ದನೆಂದು ತಿಳಿದುಬಂದಿದೆ. ಈತನ ನೀತಿಬೋಧನೆಯ ಮಹತ್ವವನ್ನರಿತ ಜನರು ಕಾಲಕ್ರಮೇಣ ಇವನನ್ನು ಭೂಮಿಯ ಮತ್ತು ಸ್ವರ್ಗದ ದೇವತೆಗಳ ಶ್ರೇಣಿಗೆ ಸೇರಿದಾತನೆಂದು ತಿಳಿದು ಆರಾಧಿಸಲುಪಕ್ರಮಿಸಿದರು.

ಲಿಯಾಟ್ಸೆ ಎಂಬ ವಿಭೂತಿ ಪುರುಷನು ಕಾನ್‌ಫ್ಯೂಷಿಯಸ್‌ನಿಗಿಂತ ಮೊದಲಿಗನಾಗಿ ಒಂದು ಪುಸ್ತಕ ಭಾಂಡಾರದ ಯಾಜಮಾನ್ಯದಲ್ಲಿದ್ದ ಕ್ರಿ. ಪೂ. ೬೦೪ರಲ್ಲಿಯೇ ಪಂಡಿತನಾಗಿದ್ದನು. ಈತನಿಗೆ ದೇವರಲ್ಲಿ ನಂಬಿಕೆಯಿರಲಿಲ್ಲ. ಪೂಜಾಪದ್ಧತಿಗಳು ಕೂಡ ಇವನಿಂದ ವಿರೋಧಿಸಲ್ಪಟ್ಟವು. ಆದರೆ ಆ ಮಹಾವ್ಯಕ್ತಿಯು ಸೃಷ್ಟಿಯ ವೈಚಿತ್ರ್ಯವನ್ನು ತಿಳಿಯುವದರಲ್ಲಿ ಈತನು ಆಸಕ್ತನಾಗಿದ್ದನು. ಇಂದಿಗೆ ಈತನ ಸಲುವಾಗಿಯೇ ದೇವಾಲಯಗಳು ನಿರ್ಮಿತವಾಗಿವೆ. ಚೀಣೀಯರ ಐತಿಹ್ಯದ ರೀತಿಯಿಂದ ಕಾನ್‌ಫ್ಯೂಷಿಯಸ್ ಮತ್ತು ಲಿಯೋಟ್ಸೆ ಇವರು ಪೂಜಾರ್ಹರಾದ ವ್ಯಕ್ತಿಗಳು.

ಬೌದ್ಧಮತವು ಚೀಣಾದಲ್ಲಿ ಪ್ರಚುರವಾದನಂತರ ಅವರ ಮತವು ಉತ್ತಮಗೊಂಡಿತೆಂದು ಹೇಳಬಹುದು. ಅವರ ಪ್ರಾಚೀನ ಚರಿತ್ರೆಯ ವಿಷಯವಾಗಿ ಸಾಕಾದಷ್ಟು ಆಧಾರಗಳು ಉಳಿದಿಲ್ಲ. ಯಾಕೆಂದರೆ ಕ್ರಿ. ಪೂ. ೩ನೆಯ ಶತಮಾನದಲ್ಲಿ ಉಂಟಾದ ಬೆಂಕಿಯ ಅನಾಹುತದಿಂದ ಅವರ ಅನೇಕ ಅಮೂಲ್ಯ ಗ್ರಂಥಗಳು ನಾಶಹೊಂದಿದವೆಂದು ತಿಳಿದು ಬಂದಿದೆ.

ಚೀಣೀಯರಲ್ಲಿ ರಾಜಮನೆತನದವರು ಆಳುತ್ತಿದ್ದರು. ರಾಜತ್ವದಲ್ಲಿ ಅವರಿಗೆ ವಿಶೇಷ ಗೌರವವಿದ್ದಿತು. ಬಹಳ ಕಾಲದ ವರೆಗೆ ಚೀಣಾ ದೇಶದ ನಾಗರಿಕತೆಯಲ್ಲಿ ಹೊರಗಿನ ಸಂಪರ್ಕವಿರಲಿಲ್ಲ. ಆದಕಾರಣ

ಆಗ ಅವರ ಪದ್ಧತಿಗಳೇ ರೂಢಿಯಲ್ಲಿದ್ದವು. ಇಂದಿಗೂ ಅವರದೇ ಒಂದು ಪುರಾತನ ನಾಗರಿಕತೆಯ ವೈಶಿಷ್ಟ್ಯವನ್ನು ಪಡೆದಿದೆ.

ಆಧುನಿಕ ಪ್ರಪಂಚದಿಂದಲೂ ಚೀಣಾದೇಶವು ಭಾರತದೊಡನೆ ಮಧುರ ಬಾಂಧವ್ಯವನ್ನಿಟ್ಟುಕೊಂಡಿದೆ. ಭಾರತದ ಸಮಸ್ಯೆಗಳ ಪರಿಹಾರಕ್ಕಾಗಿ ಸಹಾನುಭೂತಿಯಿಂದ ಕೂಡಿದೆ. ಇಲ್ಲಿಯ ಮಾರ್ಶಲ್ ಚಿಯಾಂಗ ಕೈ ಷೇಕರು ಭಾರತದ ಪರಮಮಿತ್ರರು. ಪಂಡಿತ ಜವಾಹರಲಾಲ ನೆಹರೂರವರು ಚೀಣಾದಲ್ಲಿ ಕೆಲವು ದಿವಸ ಪ್ರವಾಸ ಮಾಡಿ ಅವರ ಸ್ನೇಹ ಗೌರವಗಳನ್ನು ಪಡೆದರು. ಈಚೆಗೆ ಚೀಣಾದಲ್ಲಿ ಭಾರತ ರಾಯಭಾರಿಯಾಗಿದ್ದ ಶ್ರೀ. ಕೆ. ಪಿ. ಎಸ್. ಮೆನನ್‌ರವರು ತಮ್ಮ ಅನುಭವಗಳನ್ನು ಒಂದು ಪುಸ್ತಕದಲ್ಲಿ ಹೃದಯಂಗಮವಾಗಿ ವರ್ಣಿಸಿದ್ದಾರೆ. ಏಷ್ಯಾ ಸಂಸ್ಕೃತಿಯನ್ನು ಚೀಣಾದೇಶವು ಬೆಳೆಸುತ್ತಲಿದೆ. ಏಷ್ಯಾ ಸಂಘಟನೆಗಾಗಿ ಚೀಣಾದೇಶವೂ ಸಹಕರಿಸುತ್ತಿದೆ. ಭಾರತದ ಸಂಸ್ಕೃತಿಯನ್ನು ಅದು ಆದಿಯಿಂದಲೂ ಗೌರವಿಸುತ್ತಿದೆ. ಕವಿ ರವೀಂದ್ರರಂತಹರನ್ನು ಅದು ಗೌರವಿಸಿದೆ.



## ೭ ಇಂಡಿಯಾ ದೇಶ

ಚೀಣಾದೇಶದಂತೆ ಇಂಡಿಯಾ ದೇಶವೂ ಬಹಳ ವಿಸ್ತೀರ್ಣವಾದುದು. ಅಂತೆಯೇ ಅದು ವಿಶಾಲ ಕೀರ್ತಿಯನ್ನು ಪಡೆದು ಪ್ರಖ್ಯಾತವಾಗಿದೆ. ಈ ದೇಶದ ಪುರಾಣೇತಿಹಾಸದಲ್ಲಿ ಭರತ ವರ್ಷ, ಭರತಖಂಡವೆಂದು ಇದು ಕರೆಯಲ್ಪಟ್ಟಿದೆ. ಇಂಡಿಯಾಕ್ಕೂ ಚೀಣಾಕ್ಕೂ ಬೌದ್ಧಮತದ ದೆಸೆಯಿಂದ ಸಾಂಸ್ಕೃತಿಕ ಸಂಪರ್ಕವುಂಟಾಯಿತೆಂದು ಕ್ರಿ. ಶ. ೫ನೆಯ ಶತಮಾನದಲ್ಲಿ

ಈ ದೇಶಕ್ಕೆ ಚೀಣಾದಿಂದ ಯಾತ್ರಿಕನಾಗಿ ಬಂದ ಫಾಹಿಯಾನನ ಬರಿವಣಿಗೆಯಿಂದ ತಿಳಿದುಬಂದಿದೆ. ಇದಕ್ಕೂ ಮುಂಚೆ ಈ ದೇಶದಿಂದ ಚೀಣಾ ದೇಶಕ್ಕೆ ಗೌತುಮಬುದ್ಧನ ಸಾಕ್ಷಾತ್ ಶಿಷ್ಯರು ಹೋಗಿ ಅಲ್ಲಿಯ ಚಕ್ರವರ್ತಿಗಳಿಂದ ಸನ್ಮಾನಿತರಾಗಿ ಅಲ್ಲಿ ಬೌದ್ಧಮತವನ್ನು ಪ್ರಚುರಪಡಿಸಿದ್ದರು. ಈ ದೇಶದ ಪ್ರಾಕೃತಿಕ ಸಂಪತ್ತು ಹೊರಗಿನವರನ್ನು ಆಕರ್ಷಿಸುತ್ತಿತ್ತೆಂಬಲ್ಲಿ ಅತಿಶಯೋಕ್ತಿಯಿಲ್ಲ. ಆಗಿಂದಾಗ ಜನರು ಈ ದೇಶಕ್ಕೆ ತಂಡೋಪತಂಡವಾಗಿ ಏಷ್ಯಾಖಂಡದ ಕೆಲವು ಭಾಗಗಳಿಂದ ಬಂದು ನೆಲೆಸಿದರು. ಯುರೋಪದ ಜನರು ಇಲ್ಲಿಗೆ ಬಂದುದು ೧೫ನೆಯ ಶತಮಾನದಲ್ಲಿ. ಹೀಗೆ ಪ್ರಪಂಚದ ವಿವಿಧ ಬುಡಕಟ್ಟಿನ ಜನರು ಈ ದೇಶಕ್ಕೆ ಆಗಿಂದಾಗ ಆರ್ಥಿಕ ಮತ್ತು ರಾಜಕೀಯ ಕಾರಣಗಳಿಗಾಗಿ ಬಂದು ನೆಲೆಸಿದರು. ಆದಕಾರಣ ವಿವಿಧ ಜನಾಂಗಗಳಿಗೆ ಆಶ್ರಯ ಕೊಟ್ಟಿರತಕ್ಕ ಈ ದೇಶದ ಸಂಸ್ಕೃತಿಯಲ್ಲಿ ವೈವಿಧ್ಯವಿದೆ.

ಆದರೆ ಈ ದೇಶದ ಪುರಾತನ ನಾಗರಿಕತೆಯ ಮೂಲ ಪುರುಷರು ಯಾರೆಂದು ವಿಚಾರ ಮಾಡಿದಲ್ಲಿ ಆರ್ಯರೆಂದು (ಸಿಂಧೂ ನದಿಯ ದಂಡೆಯಲ್ಲಿ ನೆಲೆಸಿದರು) ಕೆಲವರೂ ದ್ರಾವಿಡರೆಂದು ಕೆಲವರೂ ಅಭಿಪ್ರಾಯಪಡುತ್ತಾರೆ. ಮತ್ತೆ ಕೆಲವರು ದ್ರಾವಿಡರೂ ಕೂಡ ಹೊರಗಿನಿಂದ ಬಂದವರೆಂದು ಅಭಿಪ್ರಾಯ ಪಡುವರು. ಇವೆರಡು ಸಂತತಿಯವರೂ ಏಷ್ಯಾ ಖಂಡಕ್ಕೆ ಸೇರಿದವರಾದ್ದರಿಂದ ಸಾಂಸ್ಕೃತಿಕ ಅಂತಸ್ತನ್ನು ನಿರ್ಧರಿಸಲು ಭಿನ್ನಾಭಿಪ್ರಾಯಗಳಿಗೇ ಪ್ರಾಶಸ್ತ್ಯ ಅನವಶ್ಯಕ. ಸಿಂಧೂ ನದಿಯ ತೀರದಲ್ಲಿಯ ಇತ್ತೀಚಿನ ಸಂಶೋಧನಗಳ ಪರಿಣಾಮವಾಗಿ ಬಹಳ ಪುರಾತನ ಕಾಲದಲ್ಲಿ ಅಂದರೆ ಕ್ರಿ. ಪೂ. ೫೦೦೦ ಶತಮಾನಗಳ ಹಿಂದೆ ಅತ್ಯುನ್ನತ ಸ್ಥಿತಿಯಲ್ಲಿದ್ದ ನಾಗರಿಕತೆಯ ಆಧಾರಗಳು ದೊರೆತಿವೆ. ಅವುಗಳ ಪರೀಕ್ಷೆಯಿಂದ ಆ ನಾಗರಿಕತೆಯು ಆರ್ಯರ ನಾಗರಿಕತೆಗಿಂತಲೂ ಪ್ರಾಚೀನವಾದದ್ದೆಂದು ನಿರ್ಧರಿಸಿದ್ದಾಗಿದೆ.

ಇಂದಿನ ಇಂಡಿಯಾ ದೇಶದಲ್ಲಿ ವಿವಿಧ ಜನಾಂಗಗಳಿಗೆ ಸೇರಿದ ಜನರು ವಾಸಿಸುತ್ತಿದ್ದಾರೆ. ಇವರೆಲ್ಲರನ್ನು ಇಂಡಿಯಾ ದೇಶದ ಜನರು

ಅಥವಾ ಹಿಂದೂಗಳು ಎಂದು ಕೆಲವರು ಕರೆದಿದ್ದಾರೆ. ಹಾಗೆ ಕರೆಯಲು ಆರಂಭ ಮಾಡಿದ ಪರಕೀಯರಲ್ಲಿ ಗ್ರೀಕರು ಮತ್ತು ಪರ್ಶಿಯನ್ನರು ಮೊದಲಿಗರು. ತತ್ಪೂರ್ವದಲ್ಲಿ ಆರ್ಯರು ಮತ್ತು ಅನಾರ್ಯರು ಎಂಬ ಭೇದಗಳಿದ್ದವು. ಅನಾರ್ಯರೆಂದು ಭಾವಿಸಲ್ಪಟ್ಟ ಜನರಲ್ಲಿಯೇ ಕೆಲವು ಭೇದಗಳಿದ್ದವು. ಈ ದೇಶದ ಮೂಲ ನಿವಾಸಿಗಳು ಕೋಲರು ಮತ್ತು ದ್ರಾವಿಡರು Aboriginal Tribes ಕೋಲರು ಅನಾಗರಿಕರಾಗಿ ಬೆಟ್ಟ ಗುಡ್ಡಗಳಲ್ಲಿಯೂ ಕಾಡುಗಳಲ್ಲಿಯೂ ವಾಸಿಸುತ್ತಿದ್ದರು. ಅವರಿಗೆ ನಾಗರಿಕತೆಯ ಜೀವನದ ರೀತಿಯು ತಿಳಿದಿರಲಿಲ್ಲ. ಇವರ ಸಂತತಿಯವರೂ ಇಂದಿಗೂ ಮಧ್ಯಪ್ರಾಂತದ ಕಾಡುಗಳಲ್ಲಿಯೂ ನೀಲಗಿರಿ ಬೆಟ್ಟದಲ್ಲಿಯೂ ವಾಸಿಸುತ್ತಿದ್ದಾರೆಂದು ನಿರ್ಧರಿಸಿದ್ದಾರೆ.

ದ್ರಾವಿಡರು ನಾಗರಿಕತೆಯನ್ನು ಬಲ್ಲವರಾಗಿದ್ದರು. ಅವರಿಗೆ ಆಡಳಿತ ಪದ್ಧತಿ, ಕುಶಲವಿದ್ಯೆ ಮತ್ತು ಕೈಗಾರಿಕೆಗಳು ಬರುತ್ತಿದ್ದವು. 'ದ್ರಾವಿಡರು ಕೂಡ ಹಿಂದುಸ್ಥಾನಕ್ಕೆ ಫಾರ್ಸಿಸ್ಥಾನದ ದಕ್ಷಿಣ ಭಾಗದಿಂದ ಸಿಂಧು ಪ್ರಾಂತಕ್ಕೆ ಬಂದು ನೆಲೆಸಿ ಅಲ್ಲಿ ನಾಗರಿಕತೆಯನ್ನು ಬೆಳೆಸಿದರು.' ಎಂದು ಕೆಲವು ಚರಿತ್ರಕಾರರ ಮತವು. 'ಆ ಜನರೂ ಮೆಸೊಪೊಟಾಮಿಯಾ ಪ್ರದೇಶದಲ್ಲಿ ಮೊದಲು ನೆಲೆಸಿದ್ದ ಸುಮೇರಿಯನ್ನರೆಂಬ ಜನರೂ ಈ ಜನರೂ ಬಹುಶಃ ಒಂದೇ ಗುಂಪಿನವರು' ಎಂದು ಎಫ್. ಜಿ. ಪೀಯರ್ಸರವರು 'ಗತಕಾಲದ ಗುರುತುಗಳು' ಎಂಬ ಪುಸ್ತಕದ 'ಸಭ್ಯತೆಯ ತೊಟ್ಟಿಲುಗಳು' ಭಾಗದ ಪುಟ ೧೧ರಲ್ಲಿ ವ್ಯಕ್ತಪಡಿಸಿದ್ದಾರೆ. ಸುಮೇರಿಯನ್ನರು ಕಟ್ಟಿದ ಉರ್ ಎಂಬ ಪಟ್ಟಣದಲ್ಲಿ ಹೊರತೆಗೆದ ವಸ್ತುಗಳ ಸ್ವರೂಪವನ್ನು ಹೋಲುವ ಆಭರಣಗಳೂ ಪಾತ್ರೆಗಳೂ ಸಿಂಧೂ ನದಿಯ ಪಕ್ಕದಲ್ಲಿ ದೊರೆತಿವೆಯಾದ ಕಾರಣ ಮೇಲ್ಕಂಡ ನಿರ್ಧಾರಕ್ಕೆ ಬರಲಾಗಿದೆ. ಈ ಕಾರಣಗಳಿಂದಲೇ ಸಿಂಧೂ ನದಿಯ ತೀರದಲ್ಲಿ ಇತ್ತೀಚೆಗೆ ಹರಪ್ಪ ಮತ್ತು ಮೊಹಂಜೊದಾರೊ ಎಂಬ ಪ್ರದೇಶಗಳಲ್ಲಿ ಹೊರತೆಗೆದ ನಾಗರಿಕತೆಯು ದ್ರಾವಿಡರಿಗೆ ಸಂಬಂಧ ಪಟ್ಟದ್ದೆಂದು ಕೆಲವರು ಅಭಿಪ್ರಾಯವುಳ್ಳವರಾಗಿದ್ದಾರೆ. ಈ ಮತಕ್ಕೆ ಎಲ್ಲ ವಿದ್ವಾಂಸರ ಸಮ್ಮತಿಯಿಲ್ಲ. ಹೇಗೆ ಇರಲಿ, ದ್ರಾವಿಡರೂ ವ್ಯಾಪಾರ ಕುಶಲವಿದ್ಯೆ, ಜ್ಯೋತಿಷ್ಯಶಾಸ್ತ್ರ, ಖಗೋಳಶಾಸ್ತ್ರ ಮುಂತಾದವುಗಳಲ್ಲಿ

ಪ್ರಾವೀಣ್ಯತೆ ಪಡೆದು, ಪುರಾತನ ಕಾಲದಲ್ಲಿ ನಾಗರಿಕತೆಯ ಪೂರ್ಣತೆಯನ್ನು ಹೊಂದಿದ್ದರೆಂಬಲ್ಲಿ ಸಂದೇಹವಿಲ್ಲ.

ಈ ದೇಶಕ್ಕೆ ಪರದೇಶದಿಂದ ವಲಸೆ ಬಂದವರಲ್ಲಿ 'ಆರ್ಯ'ರೇ ಮೊದಲಿಗರು. ಇವರ ಮೂಲ ಸ್ಥಾನವು ಮಧ್ಯ ಏಷ್ಯವೆಂದು ಕೆಲವರೂ ಕಾಸಿಯನ್ ಸಮುದ್ರ ತೀರವೆಂದು ಕೆಲವರೂ ಅಭಿಪ್ರಾಯ ಪಡುತ್ತಾರೆ. ನಾಗರಿಕತೆಯ ಮೂಲ ವಿಷಯದಲ್ಲಿ ಈ ಮೊದಲೇ ವಿಶದವಾಗಿ ಚರ್ಚಿಸಲಾಗಿದೆ. ಈ ಬಗ್ಗೆ ಭಿನ್ನಾಭಿಪ್ರಾಯಗಳು ಏನೇ ಇರಲಿ, ಈ ಜನಾಂಗದವರು ಇಂದು ಪ್ರಪಂಚದ ನಾನಾಕಡೆಗಳಲ್ಲಿ ನೆಲೆಸಿ ಉನ್ನತ ನಾಗರಿಕತೆಯನ್ನೂ ಸಂಸ್ಕೃತಿಯನ್ನೂ ಬೆಳಿಸಿದ್ದಾರೆ. ಹಿಂದಿನ ಅಧ್ಯಾಯದಲ್ಲಿ ಸ್ಪಷ್ಟಪಡಿಸಿದಂತೆ ಆರ್ಯರ ಸಂತತಿಗೆ ಸೇರಿದವರು ಯಾರುಯಾರೆಂದು ಕಂಡುಹಿಡಿಯಲು ಅವರ ಮೂಲ ಭಾಷೆಯ ಸ್ವರೂಪದ ಅಭ್ಯಾಸವು ಸಹಕಾರಿಯು. ಸಂಸ್ಕೃತ, ಪರ್ಶಿಯನ್, ಆಂಗ್ಲ, ಸ್ಲಾವೋನಿಯನ್, ಕೆಲ್ಟ, ಇಟಾಲಿಯನ್, ಟ್ಯೂಟಾನಿಕ್ ಈ ಭಾಷೆಗಳ ಪರೀಕ್ಷೆಯ ಪರಿಣಾಮವಾಗಿ, ಕೆಲವು ಪದಗಳ ಪ್ರಯೋಗದಲ್ಲಿ, ಅವುಗಳ ಅರ್ಥಸೂಚನೆಯಲ್ಲಿ ಸಾಮಿಪ್ಯವು ಕಂಡುಬಂದಿರುತ್ತದೆ. ಇದಲ್ಲದೆ ಇವರ ಸಾಹಿತ್ಯದಲ್ಲಿ ಇವರು ನೆಲೆಸಿದ್ದ ಪ್ರದೇಶದ ಲಕ್ಷಣಗಳ ವಿವರಣೆಯು ಇರುವ ಕಾರಣ, ಆ ಪ್ರದೇಶವನ್ನು ನಿರ್ಧರಿಸಲು ಸಾಕಾದಷ್ಟು ಆಧಾರಗಳು ದೊರೆತಿವೆ. ಆರ್ಯರ ಪ್ರಾಚೀನ ಚರಿತ್ರೆಯನ್ನು ಬರೆದಿದ್ದ ಪಿ. ಗೈಲ್ಸ್-ಡಿ. ಲಿಟ್-ಇಮ್ಯಾನ್ಯುಅಲ್ ಕಾಲೇಜದ ಮಾಸ್ತರರು—ಕೆಂಬ್ರಿಜ್ ಯುನಿವ್ಹರ್ಸಿಟಿಯಲ್ಲಿ ಕಂಪ್ಯಾರಿಟಿವ್ಹ ಫಾಯಲಾಲಿಜಿಯ ರೀಡರರು— ಇವರು ತಾವು ಬರೆದ 'ಕೆಂಬ್ರಿಜ್ ಹಿಸ್ಟರಿ ಆಫ್ ಇಂಡಿಯಾ'ದಲ್ಲಿ ಆರ್ಯರ ಸಂತತಿಗೆ ಸೇರಿದವರು ಮೊಟ್ಟ ಮೊದಲು ಇರಾನಿನಲ್ಲಿ ನೆಲೆಸಿದ ನಂತರ ಉತ್ತರ ಹಿಂದುಸ್ಥಾನದಲ್ಲಿ ನೆಲೆಸಿದರೆಂದು ಅಭಿಪ್ರಾಯಪಡುತ್ತಾರೆ. ಇತ್ತೀಚೆ ಜರ್ಮನಿಯಲ್ಲಿಯ ಬೋಘಸ್ಕಾಂಯ್ ಎಂಬಲ್ಲಿ ನಡೆದಿರತಕ್ಕ ಭೂಶೋಧನೆಗಳಲ್ಲಿ ದೊರೆತ ಶಾಸನಗಳಿಂದ, ಪಂಜಾಬದಲ್ಲಿ ನೆಲೆಸಿದ ಆರ್ಯರು ಋಗ್ವೇದ ಕಾಲದಲ್ಲಿ ಪೂಜಿಸುತ್ತಿದ್ದ ಮಿತ್ರ, ಇಂದ್ರ, ವರುಣ, ನಾಸತ್ಯಾ ಈ ದೇವರುಗಳ ಹೆಸರು

**ದೊರೆತಿವೆ.** ಈ ಶಾಸನವು ಕ್ರಿ. ಪೂ ೧೪೦೦ಕ್ಕೆ ಸಂಬಂಧಿಸಿದುದಾದ್ದರಿಂದ ಬಹು ಪ್ರಾಚೀನ ಕಾಲಕ್ಕೆ ಸಂಬಂಧಪಡುತ್ತದೆ. ಈ ಶಾಸನದ ಆಧಾರದ ಮೇಲೆ, ಆರ್ಯರ ಕೆಲವು ಗುಂಪಿನವರು ಪ್ರಾಯಶಃ ನೆಲೆಸಿದರೆಂದು ಅಭಿಪ್ರಾಯಪಟ್ಟದ್ದಾಗಿದೆ. ಬೋಘಸ್ಕಾಯ ಶಾಸನದ ಕಾಲಕ್ಕೆ ಸೇರಿದ ಟೆಲ್-ಅಲ್-ಅಮರ್ನದಲ್ಲಿ ದೊರೆತ ಕೆಲವು ಆಧಾರಗಳ ಮೇಲಿಂದ ಮೆಸ್ಪೊಟೇಮಿಯಾ ವಾಯುವ್ಯದಲ್ಲಿದ್ದ ಮಿತಾನಿ ಜನರ ರಾಜರ ಹೆಸರು ಆರ್ತತಮ, ತುಷ್ರಾತ, ಸುತ್ತರ್ಣ ಮತ್ತು ದಶ್ರಟ್ಟ—ಎಂದಿರುವದರಿಂದ ಆರ್ಯರ ಮಾತೃಭಾಷೆಯಾದ ಸಂಸ್ಕೃತಕ್ಕೆ ಇವು ಸಾಮಿಪ್ಯವನ್ನು ಸೂಚಿಸುತ್ತವೆ.

ಕಪ್ಪಡೋಷಿಯಾದಲ್ಲಿನ ಬೊಘಸ್ಕಾಯ ಶಾಸನದಿಂದ ವೇದಗಳ ಕಾಲದ ಸಂಸ್ಕೃತಿಯು ಇಂಡಿಯಾ ದೇಶದ ಸುತ್ತುಮುತ್ತಲು ದೇಶಗಳಲ್ಲಿ ಅಲ್ಲದೆ ದೂರದೇಶಗಳಲ್ಲಿಯೂ ಹರಡಿತ್ತೆಂದು ವಿಶದವಾಗುತ್ತದೆ. ಕ್ರಿ. ಪೂ. ೧೪ನೆಯ ಶತಮಾನದಲ್ಲಿ ಯುದ್ಧಮಾಡುತ್ತಿದ್ದ ಹಿಟ್ಟಾಯಿಟ್ ಮತ್ತು ಮಿತಾನಿ ಎಂಬ ಪಂಗಡದವರ ನಡುವೆ ಆದ ಒಪ್ಪಂದದಲ್ಲಿ ಆ ಕಾಲದಲ್ಲಿದ್ದ ಅವರ ಮತೀಯ ಪದ್ಧತಿಗಳು ತಿಳಿಯಬರುತ್ತವೆ. ಮೇಲೆ ವಿವರಿಸಿದ ಟೆಲ್-ಅಲ್-ಆಮರ್ನ ಶಾಸನದಿಂದ ಮಿತಾನಿಯಲ್ಲಿ ಕ್ರಿ. ಪೂ. ೧೪೭೦ರಿಂದ ೧೪೦೦ರ ವರೆಗೆ ಆರ್ತತಮ, ತುಷ್ರಾತ್, ಸುತ್ತರ್ಣ, ದಶ್ರತ್ತ, ಎಂಬ ನಾಲ್ವರು ರಾಜರು ಆಳಿದರೆಂದು ತಿಳಿದುಬಂದಿರುತ್ತದೆ. ಶಾಸನಗಳ ಪರೀಕ್ಷೆಯಿಂದ ಅಷ್ಟು ಪ್ರಾಚೀನ ಕಾಲದಲ್ಲಿಯೇ ಇಂಡಿಯಾ ದೇಶದ ನಾಗರಿಕತೆಯು ಯುಫ್ರೆಟಿಸ್ ನದಿಯ ಮೇಲ್ಭಾಗದ ಕಣಿವೆಯ ವರೆಗೂ ವ್ಯಾಪಿಸಿತ್ತೆಂದು ತಿಳಿದುಬರುತ್ತದೆ.

ಅಷ್ಟೇ ಅಲ್ಲ; ಇಂಡಿಯಾದಲ್ಲಿ ಇಸ್ಲಾಂ ಮತವು ಪ್ರಚಾರಕ್ಕೆ ಬರುವ ಮೊದಲು ಅರೇಬಿಯಾದಲ್ಲಿ ಅನೇಕ ಜನ ಹಿಂದೂಗಳು ಅದರಲ್ಲೂ ಬ್ರಾಹ್ಮಣರು ವಾಸಿಸುತ್ತಿದ್ದರೆಂದೂ ಅವರು ಹಿಂದೂ ಮತದ ಪದ್ಧತಿಗಳನ್ನು ಆಚರಿಸುತ್ತ ಶಿವನನ್ನು ಮಕ್ಕೇಶನೆಂದು ಆರಾಧಿಸುತ್ತಿದ್ದರೆಂದೂ ಮ. ರಾ. ಶಿಶಿರಕುಮಾರ ಮಿತ್ರರವರು ಎಪ್ರಿಲ್ ೧೯೪೭ರಲ್ಲಿ ಪ್ರಕಟವಾಗಿರುವ

ಇಂಡಿಯನ್ ರಿವ್ಯೂದಲ್ಲಿಯ ತಮ್ಮ ಲೇಖನದಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಖಗೋಳಶಾಸ್ತ್ರ ಮತ್ತು ಜ್ಯೋತಿಶಾಸ್ತ್ರದಲ್ಲಿ ಪ್ರವೀಣರೆಂದೆನಿಸಿರುವ ಸುಪ್ರಸಿದ್ಧ ಯವನಾಚಾರ್ಯರು ಬ್ರಾಹ್ಮಣ ಮನೆತನದಲ್ಲಿ ಹುಟ್ಟಿದವರೆಂದೂ—ಹೀಗೆ ಅರೇಬಿಯಾದಲ್ಲಿ ನೆಲೆಸಿದ್ದ ಬ್ರಾಹ್ಮಣರಿಂದಲೇ ಅರೇಬಿಯನ್‌ರು ಗಣಿತಶಾಸ್ತ್ರ ಮತ್ತು ಜ್ಯೋತಿಷ್ಯಶಾಸ್ತ್ರಗಳನ್ನು ಕಲಿತರೆಂದೂ ಅಭಿಪ್ರಾಯಪಟ್ಟಿದ್ದಾರೆ.

ಇದಲ್ಲದೆ ಭಾರತದ ಸಂಸ್ಕೃತಿಯು ಬೌದ್ಧಮತದ ಸಲುವಾಗಿ ಬಹಳ ದೂರದೇಶಗಳಲ್ಲಿಯೂ ಹರಡಲು ಕಾರಣವಾಗಿದೆ. ಇಂಡಿಯಾಕ್ಕೂ ಮಧ್ಯ ಏಷ್ಯಾಕ್ಕೂ ಉಂಟಾಗಿದ್ದ ಸಾಂಸ್ಕೃತಿಕ ಮತ್ತು ವಾಣಿಜ್ಯ ಸಂಪರ್ಕದಿಂದ ಇಂಡಿಯಾದ ಕೆಲವರು ಅಲ್ಲಿಯೇ ಶಾಶ್ವತವಾಗಿ ನೆಲೆಸಿ ಇಲ್ಲಿಯ ಸಂಸ್ಕೃತಿಯನ್ನು ಅಲ್ಲಿ ಬೆಳೆಸಿದರು. ಗೋಬಿ ಮರುಭೂಮಿಯಲ್ಲಿ ದೊರೆತಿರತಕ್ಕ ಅವಶೇಷಗಳಲ್ಲಿ ಸುಮಾರು ೨೦೦೦ ವರುಷಗಳ ಹಿಂದೆ ಇಂಡಿಯಾದಲ್ಲಿಯೇ ಪ್ರಚಾರದಲ್ಲಿದ್ದ ಭಾಷೆ, ನಾಣ್ಯಗಳು, ಪುರಾಣೇತಿಹಾಸಗಳು ಗಣೇಶ ಮತ್ತು ಕುಬೇರನ ವಿಗ್ರಹಗಳು ಮತ್ತು ಈ ದೇಶಕ್ಕೆ ಸಂಬಂಧಿಸಿದಂಥ ವಾಸ್ತು ಶಿಲ್ಪಗಳು ದೊರೆತಿವೆ. ಇವುಗಳಲ್ಲಿ ಬೌದ್ಧಮತದ ಪ್ರಭಾವವು ವಿಶೇಷವಾಗಿ ಕಂಡು ಬರುತ್ತದೆ. ಈ ಕಾರಣಗಳಿಂದ ಭಾರತದ ನಾಗರಿಕತೆಯು ದೂರದೇಶಗಳಲ್ಲೂ ವ್ಯಾಪಿಸಿತ್ತೆಂದು ತಿಳಿದುಬರುತ್ತದೆ.

ಇನ್ನೊಂದು ಅಭಿಪ್ರಾಯವಿದೆ. ಭಾರತದ ಸಂಸ್ಕೃತಿಯಲ್ಲಿ ಅತಿ ಪ್ರಾಚೀನವೂ ಆದ ಚತುರ್ವೇದಗಳಲ್ಲಿ ಮೊದಲಿನ ಮೂರು ಅಂದರೆ ಋಗ್ವೇದ,ಯಜುರ್ವೇದ ಮತ್ತು ಸಾಮವೇದ ಇವುಗಳನ್ನು "ತ್ರಯಾ" ಎಂದು ಕರೆಯುತ್ತಾರೆ. ಅಥರ್ವಣವೇದದಲ್ಲಿ ಮಾಯೆ, ತಂತ್ರ ಮೊದಲಾದವು ನಿರೂಪಿತವಾಗಿವೆ. ಶ್ರೀ. ಬಾಲಗಂಗಾಧರ ತಿಲಕರವರು ಫ್ರೆಂಚ ವಿದ್ವನ್ಮಣಿಯಾದ ಲೆನೋರ್ಮಂಟಿರವರು ವ್ಯಕ್ತಪಡಿಸಿರುವ ಅಭಿಪ್ರಾಯಕ್ಕೆ ನಮ್ಮ ಗಮನವನ್ನು ಸೆಳೆದಿದ್ದಾರೆ:— ಆರ್ಯರು ಶ್ರೇಷ್ಠ ದೇವತೆಗಳನ್ನು ಪೂಜಿಸುತ್ತಿದ್ದರು. ಮಂಗೋಲಿಯಾ ಬುಡಕಟ್ಟಿಗೆ ಸೇರಿದ ಮತ್ತು ಬ್ಯಾಬಿಲೋನಿಯಾದಲ್ಲಿ ವಾಸಿಸುತ್ತಿದ್ದ ಕಾಲ್ಡಿಯನ್ನರು ಪೈಶಾಚಿಕ ಶಕ್ತಿಗಳನ್ನು

ಆರಾಧಿಸುತ್ತಿದ್ದರು. ಅಥರ್ವಣ ವೇದದಲ್ಲಿ ಕಾಣಬರುವ ತೈಮಾತ, ಅಲಿಗಿ, ವಿಲಿಗಿ, ಉರುಗಲ ಎಂಬವುಗಳಲ್ಲಿ ತೈಮಾತ-ಎಂಬ ಹೆಸರು ಕಾಲ್ಡೀಯನರ ಮತ್ತೀಯರ ಚರಿತ್ರೆಯಲ್ಲಿಯೂ ಅಲಿಗಿ ಎಂಬ ಶಬ್ದವು ಅಸ್ಸಿರೀಯನರ ಭಾಷೆಯಲ್ಲಿ ಅವರ ದೇವರಾದ ಬಿಲ್ಲಿದೇವರೆಂದೂ ನಿರ್ಧರಿಸಿದ್ದಾರೆ. ಈ ರೀತಿಯಾಗಿ ವೇದಗಳಲ್ಲಿ ಅನೇಕ ಪಾರಿಭಾಷಿಕ ಶಬ್ದಗಳು ಅಡಕವಾಗಿವೆ. ಅಸುರ ಎಂಬ ಶಬ್ದವನ್ನು ಎರಡು ಅರ್ಥಬರುವಂತೆ ಪ್ರಯೋಗಿಸಲಾಗಿದೆ.

ಅಸುರ ಎಂಬ ಶಬ್ದವು ಋಗ್ವೇದದ ದೇವತೆಗಳಲ್ಲಿ ಇಂದ್ರನಿಗೆ ಅನ್ವಯಿಸುತ್ತದೆ. ಇನ್ನೊಂದು ಸಂದರ್ಭದಲ್ಲಿ ಮಿತ್ರವರುಣರಿಗೂ ಅನ್ವಯಿಸುತ್ತದೆ. ಅಸುರ ಶಬ್ದಕ್ಕೆ ಇನ್ನೊಂದು ಅರ್ಥ—ಅದು ಒಂದು ಪಂಗಡವನ್ನು ಸೂಚಿಸುತ್ತದೆ. ಇವರು ಋಗ್ವೇದ ಕಾಲದಲ್ಲಿ ಅಸ್ಸಿರೀಯನ್ನರಾಗಿದ್ದರೆಂದೂ ಕ್ರಮೇಣ ಇವರು ಆರ್ಯರ ಅನುಯಾಯಿಗಳಾದರೆಂದೂ ನಿಶ್ಚಯಿಸಲಾಗಿದೆ. ಇಂದಿಗೂ ದಕ್ಷಿಣ ಬಿಹಾರಿನಲ್ಲಿ ಅಸುರ ಎಂಬ ಪಂಗಡದ ಜನರಿದ್ದಾರೆ. ಈ ಅಭಿಪ್ರಾಯಗಳು ಏನೇ ಇರಲಿ ಅಸುರರ ಸಂಪರ್ಕದಿಂದ ಭಾರತದ ಸಂಸ್ಕೃತಿಯ ಮೇಲೆ ಪರಿಣಾಮವುಂಟಾಯಿತು. ಈ ಅಭಿಪ್ರಾಯವನ್ನು ಡಾ. ಡಿ. ಆರ್. ಭಂಡಾರ್ಕರವರ ವಾಕ್ಯಗಳ ಆಧಾರದ ಮೇಲೆ ಸ್ಪಷ್ಟಪಡಿಸಬಹುದು:—

"ಮೊದಲು ಅಸುರರಾಗಿದ್ದು ಹಿಂದಿನಿಂದ ಆರ್ಯರ ಧರ್ಮಕ್ಕೆ ಸೇರಿಸಲ್ಪಟ್ಟ ಜನರು ಈಗ ಹಿಂದುಗಳ ಸಂಖ್ಯೆಯಲ್ಲಿಯೇ ಬೆರೆತು ಹೋಗಿದ್ದಾರೆ............ಆದರೆ ಈ ಅಸುರರು ಹಿಂದೂ ಸಂಸ್ಕೃತಿಯ ಮೇಲೆ ಕೆಲವೊಂದು ಪರಿಣಾಮವನ್ನುಂಟು ಮಾಡಿದ್ದರೆಂಬಲ್ಲಿ ಸಂದೇಹಕ್ಕೆ ಆಸ್ಪದವೇ ಇಲ್ಲ. ಆಸುರೀ ವಿವಾಹ ಪದ್ಧತಿಯು ಬಳಕೆಯಲ್ಲಿದ್ದುದು ಪ್ರಸಿದ್ಧವೇ ಇದೆ. ಉದಾ:— ಆಪಸ್ತಂಭ ಧರ್ಮಸೂತ್ರದಲ್ಲಿ ಇದರ ಉಲ್ಲೇಖವಿದೆ. ಇವರ ವಿಶಿಷ್ಟ ಲಕ್ಷಣವೆಂದರೆ ಕನ್ಯೆಗೆ ಕೊಡತಕ್ಕ ಶುಲ್ಕವು. ಈ ಕನ್ಯಾಶುಲ್ಕವು ಅಸ್ಸೀರಿಯನ್ನರು ಮತ್ತು ಬಾಬಿಲೋನಿಯನ್ನರ ಬಳಕೆಯಲ್ಲಿ

ಇತ್ತೆಂಬುದು ಆಗಿನ ವಸ್ತುಸ್ಥಿತಿಯಿಂದ ಕಂಡುಬರುತ್ತದೆ. ಆದರೆ ಇವುಗಳೊಳಗೆ ಮೊದಲನೆಯವರಲ್ಲಿ ಶುಲ್ಕವು ಕನ್ಯೆಗೆ ಕೊಡಲಾಗುತ್ತಿತ್ತು. ಎರಡನೆಯವರಲ್ಲಿ ಆ ಕನ್ಯೆಯ ತಂದೆಗೆ. ಇದೇ ಅವುಗಳೊಳಗಿನ ಭೇದವು."

ಆರ್ಯರ ಸಂಸ್ಕೃತಿಯನ್ನು ಕಾಲ್ಡೀಯನರ ಸಂಸ್ಕೃತಿಯಾಗಿ ಮಾಡಿದ ರೀತಿಯಿದೆಂದು ಈ ಸಂಸ್ಕೃತಿಯನ್ನು ಭಾವಿಸಲಾಗಿದೆ. ಅಥರ್ವಣ ವೇದವಲ್ಲಿರುವ ಸಂಹಿತೆಯ ವಿಚಾರವಾಗಿ ಜರ್ಮನಿಯ ವಿದ್ವಾಂಸರಾದ ರಾಠ್‌ರವರು ಈ ರೀತಿ ಅಭಿಪ್ರಾಯಪಡುತ್ತಾರೆ:—

"There is no other song in the whole of Vedic literature which expresses the divine omniscience in such embracing words and yet this beautiful work of art has been degraded into the exordium of an exorcism".

"Surely Chaldeanisation of Aryan culture cannot further go and it looks asif this hymn was composed for the benefit of an Asura convert to the Aryan faith, who could not, however, shake off his old superstition and belief in witchcraft."

ಇದಕ್ಕೆ ಪುಷ್ಟೀಕರವಾಗಿರುವಂಥ ಈ ಮೇಲಿನ ವಾಕ್ಯಗಳನ್ನು ಡಾ. ಭಾಂಡಾರಕರರವರು (ಕಲಕತ್ತೆಯ ಹಿಂದುಸ್ಥಾನ ಇತಿಹಾಸದ ನಿವೃತ್ತ ಪ್ರೊಫೆಸರರವರು) ಸರ್ ವಿಲಿಯಂ ಮೇಯರ್ ಎಂಡೋಮೆಂಟ್ ಉಪನ್ಯಾಸ ೧೯೩೯ನೆಯ ಫೆಬ್ರುವರಿ ೨೪ರಲ್ಲಿ ಮಾಡಿದ ಭಾಷಣದಿಂದ ತೆಗೆದುಕೊಳ್ಳಲಾಗಿದೆ.

ಮೇಲೆ ವಿವರಿಸಿದ ಅಂಶಗಳ ಸಮಾಲೋಚನೆಯಿಂದ ಆರ್ಯರ ಸಂಸ್ಕೃತಿಯಲ್ಲಿ ಇತರ ಸಂಸ್ಕೃತಿಗಳು ಹೇಗೆ ಸಮ್ಮಿಳನವಾಗಿ ಆರ್ಯ ಸಂಸ್ಕೃತಿಯನ್ನೇ ಅವು ಅವಲಂಬಿಸಿದವೆಂಬುದು ವ್ಯಕ್ತವಾಗುತ್ತದೆ. ಈ ಬೃಹತ್ ಜನಾಂಗದ ಸಂಸ್ಕೃತಿಯು ಸರ್ವತೋಮುಖವಾಗಿ ವ್ಯಾಪಿಸಿದೆಯೆಂಬಲ್ಲಿ ಅತಿಶಯೋಕ್ತಿಯಾಗಲಾರದು. ಆರ್ಯರ ಸಂತತಿಯವರು ಏಷ್ಯಾ

ಯುರೋಪಿನಲ್ಲಿ ಬಹಳ ಕಡೆಗಳಲ್ಲಿ ಪುರಾತನ ಕಾಲದಲ್ಲಿಯೇ ನೆಲೆಸಿದರು. ಇವರು ಇಂಡಿಯಾದಲ್ಲಿ ಮೊದಲು ಪಂಜಾಬಿನಲ್ಲಿ ನೆಲೆಸಿದರು. ಋಗ್ವೇದ ದಲ್ಲಿ ಕಾಣಬರುವ ಪ್ರಕೃತಿ ಸೊಬಗಿನ ವರ್ಣನೆಯ ಪ್ರಕಾರ ಆರ್ಯರು ಸಪ್ತಸಿಂಧೂ ದೇಶದಲ್ಲಿ ನೆಲೆಸಿದರೆಂದು ಸ್ಪಷ್ಟವಾಗುತ್ತದೆ. ಗಂಗಾ, ಯಮುನಾ, ಸರಸ್ವತೀ, ಶತದ್ರು, ಪರುಷ್ಣಿ, ಚಂದ್ರಭಾಗ, ಸಿಂಧು ಈ ನದಿಗಳು ಪ್ರವಹಿಸುತ್ತಿರುವ ಪ್ರದೇಶವೇ ಸಪ್ತಸಿಂಧೂ ದೇಶವೆಂದು ಪ್ರತೀತವಾಗಿದೆ. ಈ ಪ್ರದೇಶವನ್ನು ಅವರು ಯಜ್ಞಯಾಗಾದಿಗಳಿಗೆ ಬಹಳ ಪ್ರಶಸ್ತವೆಂದು ಭಾವಿಸಿದರು. ಅಂತೆಯೇ ಅವರ ಮನಸಿನಲ್ಲಿ ಪೂಜ್ಯ, ಸೌಂದರ್ಯ, ಸತ್ವಗಳಿಂದ ಕೂಡಿದ ಭಾವನೆಗಳು ಆವಿರ್ಭವಿಸಿದವು. ಅವರ ಸಂಸ್ಕೃತಿಯಲ್ಲಿ ಅತ್ಯುತ್ತಮವೆಂದು ಭಾವಿಸಲ್ಪಟ್ಟಿರುವ ವೇದಗಳನ್ನು ಅವರು ರಚಿಸಿದರು. ವೇದಗಳನ್ನು ಅವರು ನಾಲ್ಕು ಭಾಗಗಳನ್ನಾಗಿ ವಿಂಗಡಿಸಿದ್ದಾರೆ. ಅವುಗಳಲ್ಲಿ ಋಗ್ವೇದವು ಅತಿ ಪ್ರಾಚೀನವಾದುದು. ಅದ ರಿಂದ ಆಗಿನ ಕಾಲದ ಅವರ ಭಾವನೆಗಳೂ ಜೀವನದ ರೀತಿಗಳೂ ಅಲ್ಲದೆ ಭೌಗೋಲಿಕ ವಿವರಗಳೂ ತಿಳಿಯಬರುತ್ತವೆ. ಪಾಶ್ಚಾತ್ಯ ಪ್ರಾಜ್ಞರಾದ ಮ್ಯಾಕ್‌ಡಾನೆಲ್‌ರವರು ತಮ್ಮ ಪುಸ್ತಕ ಸಂಸ್ಕೃತ ವಾಙ್ಮಯದ ಇತಿಹಾಸ ಋಗ್ವೇದಕಾಲ ೬ನೆಯ ಚಾಪ್ಟರ ೧೩೯ ೧೪೦ ಪುಟದಲ್ಲಿ ಋಗ್ವೇದದಿಂದ ತಿಳಿದುಬರುವ ಪ್ರಕೃತಿ ಲಕ್ಷಣಗಳಿಂದ ಆರ್ಯರ ನಿವಾಸಸ್ಥಾನವನ್ನು ನಿರ್ಧರಿಸಿದ್ದಾರೆ. ಋಗ್ವೇದದ ಕಾಲದ ನಾಗರಿಕತೆಯನ್ನು ತಿಳಿಯಲು ಋಗ್ವೇದವೇ ಮೂಲಾಧಾರವಾಗಿದೆ.

ಕಾಲಕ್ರಮೇಣ ಆರ್ಯರ ಸಂಖ್ಯೆ ಹೆಚ್ಚಲು ಅವರು ಪೂರ್ವಾಭಿ ಮುಖವಾಗಿ ಸಂಚರಿಸತೊಡಗಿದರು. ದ್ರಾವಿಡರನ್ನು ಸೋಲಿಸಿ ದಕ್ಷಿಣ ದೇಶಕ್ಕೆ ಹೋಗುವಂತೆ ಮಾಡಿದರು. ಉತ್ತರದಲ್ಲಿ ನೆಲೆಸಿದ ಆರ್ಯರು ರಾಜ್ಯಗಳನ್ನು ಕಟ್ಟಿ ರಾಜಕೀಯ ಭಾಗದಲ್ಲಿಯೂ ಮುಂದುವರಿದರು. ಆರ್ಯರು ಸಾಧಿಸಿದ ಕೆಲವು ಮಹತ್ಕಾರ್ಯಗಳು ಈ ದೇಶದ ನಾಗರಿಕತೆ ಯಲ್ಲಿ ವಿಶೇಷ ಪ್ರಾಶಸ್ತ್ಯವನ್ನು ಪಡೆದವಲ್ಲದೆ ವಿಶ್ವಕ್ಕೇ ಅವು ಮಾರ್ಗ ದರ್ಶಕವಾದ ಸ್ಥಾನವನ್ನು ಪಡೆದಿವೆ.

ಆರ್ಯರು ಎಂದರೆ ಪೂಜ್ಯರು ಎಂದು ಅರ್ಥ. ಇದು ಚರಿತ್ರಾರ್ಹ ವಾಗಿದೆ. ಈ ಜನರು ಬಹಳ ಮೇಧಾವಿಗಳಾಗಿದ್ದರು. ಇವರಿಗೆ ಅಸಾಧಾರಣವಾದ ಬುದ್ಧಿಶಕ್ತಿಯಿತ್ತು. ಆದುದರಿಂದ ಇವರ ತಮ್ಮ ನಾಗರಿಕತೆಯಲ್ಲಿ ಅತ್ಯಂತ ಉತ್ಕೃಷ್ಟವಾದ ಬುದ್ಧಿಸೂಕ್ಷ್ಮತೆಯನ್ನೂ ಕುಶಲತೆಯನ್ನೂ ವ್ಯಕ್ತಪಡಿಸಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿ ಪ್ರಾಚೀನ ಗ್ರೀಕರು ಮತ್ತು ರೋಮನರು ನಾಗರಿಕತೆಯಲ್ಲಿ ಶ್ರೇಷ್ಠತೆಯನ್ನು ಪಡೆದ ಶತಮಾನಗಳ ಹಿಂದೆಯೇ ಹಿಂದೂ ಆರ್ಯರು ನಾಗರಿಕತೆಯಲ್ಲಿ ಮುಂದುವರಿದಿದ್ದರು. ಆದುದರಿಂದ ಏಷ್ಯಾ ದೇಶದಲ್ಲಿಯೇ ಆಗಲಿ ಯುರೋಪದಲ್ಲಿಯೇ ಆಗಲಿ ಯಾವ ಜನಾಂಗವೂ ಇವರ ಮಟ್ಟನ್ನು ಹಿಂದೆ ಮುಟ್ಟಿರಲಿಲ್ಲ. ಇವರ ಪಡೆದ ಸಂಸ್ಕಾರವು ಅಸಮಾನವಾದದ್ದು. ಈ ಭೂಪ್ರದೇಶಗಳಲ್ಲಿ ಮಾತ್ರವಲ್ಲದೆ ಸುಮಾತ್ರಾ, ಬೋರ್ನಿಯೊ, ಜಾವಾದ್ವೀಪಗಳಲ್ಲಿಯೂ ಹಿಂದೂ ನಾಗರಿಕತೆಯು ವ್ಯಾಪಿಸಿದೆ. ಭಾರತದ ನಾಗರಿಕತೆಯ ಪ್ರಭಾವವು ಏಷ್ಯಾದ ಇತರ ಜನಾಂಗಗಳ ಮೇಲೆ ಕಡಮೆಯೆಂದು ಕೆಲವರ ಅಭಿಪ್ರಾಯವು. ಆದರೆ ಏಷ್ಯಾದಲ್ಲಿರುವವರೂ ಬೃಹತ್ ಭಾರತದವರೆಂದು ತಿಳಿದರೆ ತಪ್ಪೇನೂ ಆಗಲಾರದು.

ಬಹಳ ಹಿಂದಿನ ಕಾಲದಿಂದಲೂ ಇಂಡಿಯಾ ದೇಶವು ವ್ಯಾಪಾರಕ್ಕೆ ಪ್ರಸಿದ್ಧವಾಗಿದೆ. ಇಂದಿಗೂ ಈ ಮಾತು ಸಹಜವಾಗಿದೆ. ಇಲ್ಲಿಯ ವಜ್ರ-ವೈಡೂರ್ಯಗಳೂ ಮುತ್ತುಗಳೂ ದಂತದ ಸಾಮಾನುಗಳೂ ಹತ್ತಿ ಮತ್ತು ರೇಶಿಮೆ ಬಟ್ಟೆಗಳೂ ಮಸಾಲೆಯ ಸಾಮಾನುಗಳೂ ಸಾಂಬ್ರಾಣಿ, ಕಸ್ತೂರಿ, ಗಂಧ ಮುಂತಾದ ಸುಗಂಧ ದ್ರವ್ಯಗಳೂ ಪಶ್ಚಿಮ ಏಷ್ಯಾದಲ್ಲಿ ಮಾರಾಟವಾಗಿ ಯುರೋಪಿಗೂ ಸಾಗುತ್ತಿದ್ದವು. ಪುರಾತನ ಭಾರತವು ಸಂಪದ್ಯುಕ್ತವಾಗಿ, ಸಸ್ಯಸಮೃದ್ಧಿಗಳಿಂದಲೂ ಕೂಡಿ ಪರಕೀಯರ ಮನಸವನ್ನು ಸೆಳೆಯುವಂತಿತ್ತು.

ಇಂಡಿಯಾ ದೇಶದ ಚರಿತ್ರೆಯು ಇತರ ಚರಿತ್ರೆಯಂತೆ ಕೆಲವು ಆಧಾರಗಳ ಮೇಲೆ ಬರೆಯಲ್ಪಟ್ಟಿದೆ. ಅದಕ್ಕೆ ಮೊದಲು ಗ್ರೀಕರ ಬರೆವಣಿಗೆಗಳೇ ಆಧಾರವಾಗಿದ್ದುವು. ಇತ್ತೀಚೆಗೆ ಸರ್ ವಿಲಿಯಂ ಜೋನ್ಸ್,

ಕರ್ನಲ್ ಟಾಡ್ ಮುಂತಾದ ಆಂಗ್ಲ ಮಹನೀಯರ ಲೇಖನಗಳಿಂದ ಇಲ್ಲಿಯ ಪ್ರಾಚೀನ ಸಾಹಿತ್ಯದ ಬೆಲೆಯನ್ನು ತಿಳಿಯಲು ಸಾಧ್ಯವಾಯಿತು. ಪ್ರಾಚೀನ ಭಾರತೀಯರ ಭಾಷೆ, ವೇದಗಳು, ದೇಶದಲ್ಲಿ ಉಳಿದ ವಾಸ್ತುಶಿಲ್ಪ, ಶಿಲ್ಪ ಕಲೆ, ಶಿಲಾಶಾಸನಗಳು, ಸ್ಮಾರಕಗಳು, ನಾಣ್ಯಗಳು, ಹಾಳು ಪ್ರದೇಶ ಗಳಲ್ಲಿ ದೊರೆತ ಅಪೂರ್ವ ಪ್ರಾಚೀನ ವಸ್ತುಗಳು, ಇವೆಲ್ಲವು ಈ ದೇಶದ ಚರಿತ್ರೆಯನ್ನೂ ಹಾಗು ಅದರ ಪ್ರಾಚೀನತೆಯನ್ನೂ ತಿಳಿಯಲು ಸಾಧ್ಯ ವಾಗಿವೆ. ಇದಲ್ಲದೆ ಈ ದೇಶದಲ್ಲಿಯ ಐತಿಹ್ಯ ಪುರಾಣಗಳೂ ಪರಕೀಯರು ಇಲ್ಲಿಗೆ ಬಂದು ವಿಷಯಗಳನ್ನು ಕಣ್ಣಾರೆ ಕಂಡು ಬರೆದಿಟ್ಟ ಬರೆಹಗಳೂ ಈ ಬಗ್ಗೆ ಸಾಧನಗಳಾಗಿವೆ. ಅಲೆಕ್ಝಾಂಡರನ ಚರಿತ್ರೆಕಾರರ ರೀತಿಯಂತೆ ಕ್ರಿ. ಪೂ. ೫೭ರಲ್ಲಿ ವಿಕ್ರಮಾದಿತ್ಯನೆಂಬ ದೊರೆಯಿದ್ದನೆಂದೂ ಅಲ್ಲಿಂದಲೇ ಭಾರತೀಯರ ಚರಿತ್ರೆಯು ಪ್ರಾರಂಭವಾಯಿತೆಂದೂ ಸ್ಪಷ್ಟವಾಗುತ್ತದೆ. ಆದರೆ ಅವರ ಚರಿತ್ರೆಯು ಇನ್ನೂ ಪ್ರಾಚೀನವಾದದ್ದು.

ಅಲೆಕ್ಝಾಂಡರನು ಇಂಡಿಯಾಕ್ಕೆ ದಂಡೆತ್ತಿ ಬಂದ ಕಾಲದಲ್ಲಿ ಈ ದೇಶದಲ್ಲಿ ಅನೇಕ ಸಣ್ಣ ಸಣ್ಣ ರಾಜ್ಯಗಳಿದ್ದವು. ಅವು ಒಗ್ಗಟ್ಟಿನಿಂದಿರದೆ ಸ್ವತಂತ್ರವಾಗಿ ಪ್ರತ್ಯೇಕ ಒಬ್ಬೊಬ್ಬ ರಾಜನ ಆಳ್ವಿಕೆಗೆ ಆಧೀನವಾಗಿದ್ದುವು. ಆಗ ಜಾತೀಯ ಪದ್ಧತಿಗಳಿದ್ದವು. ಈಜಿಪ್ತ, ಪರ್ಶಿಯಾ, ಇರಾಣಗಳಂತೆ ಭಾರತದಲ್ಲಿಯೂ ಅವು ಸಮಾಜ ಸಂಘಟನೆಗೂ ರಾಜಕೀಯ ಬೆಳೆ ವಣಿಗೆಗೂ ಕಾರಣವಾಗಿದ್ದವು. ಈ ದೇಶದಲ್ಲಿ ಆ ಪದ್ಧತಿಗಳು ಬಳಕೆ ಯಲ್ಲಿ ಬಂದಂತೆ ಇನ್ನಾವ ದೇಶದಲ್ಲಿಯೂ ಬಂದಿರಲಿಲ್ಲ. ೧ ಬ್ರಾಹ್ಮಣರು ಆಮುಷ್ಮಿಕವನ್ನೇ ಮುಖ್ಯ ಧ್ಯೇಯವಾಗಿಟ್ಟುಕೊಂಡವರು. ೨ ಕ್ಷತ್ರಿಯರು ಅಥವಾ ಯೋಧರು. ೩ ವೈಶ್ಯರು ಅಥವಾ ವ್ಯಾಪಾರಸ್ಥರು. ೪ ಶೂದ್ರರು ಅಥವಾ ಬೇಸಾಯ ಮತ್ತು ಸೇವೆ ಮಾಡುವವರು. ಹೀಗೆ ನಾಲ್ಕು ಜಾತಿಗಳಾಗಿ ಸಮಾಜವು ವಿಂಗಡಿಸಲ್ಪಟ್ಟಿದ್ದಿತು. ಈ ನಾಲ್ಕು ಜಾತಿಯವರೂ ಸೃಷ್ಟಿಕರ್ತನಾದ ಬ್ರಹ್ಮನ ಮುಖದಿಂದಲೂ ತೋಳು ಗಳಿಂದಲೂ ತೊಡೆಗಳಿಂದಲೂ ಪಾದಗಳಿಂದಲೂ ಕ್ರಮದಿಂದ ಉದ್ಭವಿ ಸಿದರೆಂದು ಪುರುಷಸೂಕ್ತದಿಂದ ವ್ಯಕ್ತವಾಗುತ್ತದೆ. ಬ್ರಾಹ್ಮಣರು ಇತರ

ಪಂಗಡಗಳಿಗೆ ಗುರುಗಳಾಗಿ ಅಥವಾ ಉಪಾಧ್ಯಾಯರಾಗಿ ದೊರೆಗಳ ಮಂತ್ರಿತ್ವವನ್ನು ನಡೆಸುತ್ತಿದ್ದರು. ಜಗತ್ತಿನ ಕಲ್ಯಾಣಕ್ಕಾಗಿ ಅವರು ಮಂಗಳ ಮಂತ್ರಗಳನ್ನು ಉಚ್ಚರಿಸುತ್ತಿದ್ದರು; ದೇವತೆಗಳಿಗೆ ಹವಿಸ್ಸನ್ನು ಅರ್ಪಿಸುತ್ತಿದ್ದರು. ಕ್ಷತ್ರಿಯರು ರಾಜ್ಯವಾಳುತ್ತಿದ್ದರು. ಪ್ರಜೆಗಳನ್ನು ಪಾಲಿಸುವದು, ರಾಜಧರ್ಮವನ್ನು ರಕ್ಷಿಸುವದು, ಬ್ರಾಹ್ಮಣರು ರಚಿಸಿದ ರಾಜ್ಯಶಾಸನಗಳನ್ನೂ ವರ್ಣನಿಯಮಗಳನ್ನೂ ಸಾಗಿಸುವದೇ ಮೊದಲಾದವು ಗಳಲ್ಲಿ ನಿರತರಾಗಬೇಕಾಗಿದ್ದಿತು. ಮನುವು ಗೊತ್ತುಪಡಿಸಿದ ಈ ಪ್ರಕಾರದ ಜಾತಿ ಧರ್ಮವು ಕಾಲಕ್ರಮೇಣ ದೇಶದಲ್ಲುಂಟಾದ ಕ್ರಾಂತಿಕಾರಕ ಬದ ಲಾವಣೆಗಳಿಂದ ಬದಲಾಯಿಸಿತು. ಮೇಲೆ ವಿವರಿಸಿದ ನಾಲ್ಕು ಜಾತಿಗಳಿಗಿಂತ ಪ್ರತ್ಯೇಕವಾಗಿ ಹಿಂದೂ ಸಮಾಜದಲ್ಲಿ ಕೀಳಾದವರನ್ನು ಚಾಂಡಾಲರೆಂದು ದೂರೀಕರಿಸಿ ಅವರಿಗೆ ಪ್ರತ್ಯೇಕ ಕರ್ತವ್ಯವನ್ನು ಹೊರಿಸಿದ್ದರು. ಇಂದಿನ ಭಾರತದ ಪ್ರಮುಖ ಸಮಸ್ಯೆಗಳಲ್ಲಿ ಆ ಚಾಂಡಾಲರೆಂದು ಭಾವಿಸಲ್ಪಟ್ಟವರ ಈಗ ಹರಿಜನರೆಂದು ತಿಳಿಯಲ್ಪಟ್ಟಿರುವವರ, ಉದ್ಧಾರವು ಒಂದು. ಜಾತಿಯ ಕಟ್ಟುಗಳು ಪ್ರಬಲವಾಗಿದ್ದ ಕಾಲದಲ್ಲಿ ಬುದ್ಧಿಶಕ್ತಿಯ ಕೆಲಸಗಳು ನೆರ ವೇರಲು ಸಾಧ್ಯವಾಯಿತು. ಅವುಗಳನ್ನು ಈ ಕಾಲದ ದೃಷ್ಟಿಯಿಂದ ಟೀಕಿಸುವುದು ಸಾಧುವಲ್ಲ.

ಭಾರತೀಯರ ಪ್ರಾಚೀನ ಭಾಷೆಗಳಲ್ಲೊಂದಾದ ಸಂಸ್ಕೃತದಲ್ಲಿ ಉತ್ಕೃಷ್ಟ ಗ್ರಂಥಗಳು ಬರೆಯಲ್ಪಟ್ಟವೆ. ಈ ದೇಶದ ಮಹಾಮಹಿಮರಾದ ಮಹರ್ಷಿಗಳು, ರಾಜರ್ಷಿಗಳು (ದಶರಥ, ಜನಕ, ಜನಮೇಜಯ, ಅಜಾತ ಶತ್ರು, ಭರತ ಮುಂತಾದವರು) ಸಾಧಿಸಿದ ತಪೋನಿಷ್ಠೆಯ ಫಲ. ಜೀವನದ ಅಮೋಘ ತತ್ವಗಳು ಅವುಗಳಲ್ಲಿ ಚಿರಸ್ಥಾಯಿಯಾಗಿ ಉಳಿದಿವೆ. ಮಾನವ ಧರ್ಮಶಾಸ್ತ್ರ, ವೇದಗಳು, ಉಪನಿಷತ್ತುಗಳು, ಸಂಹಿತೆಗಳು, ಬ್ರಾಹ್ಮಣ ಗಳು, ವೇದಾಂಗಗಳು, ಪುರಾಣಗಳು–ಭಾರತ-ಭಾಗವತ-ರಾಮಾಯಣಾದಿ ಗಳು ಸಂಸ್ಕೃತದಲ್ಲಿ ಬರೆಯಲಾಗಿವೆ. ಇವುಗಳನ್ನು ಚೆನ್ನಾಗಿ ಕಂಡು ಕೊಂಡ ಮಹದಾಚಾರ್ಯರು ಸೂತ್ರ-ಭಾಷ್ಯಗಳನ್ನೂ ಸಂಸ್ಕೃತದಲ್ಲಿಯೇ

ರಚಿಸಿದರು. ಭಕ್ತಿಭಂಡಾರಿ ಬಸವಣ್ಣನವರು ಮಾತ್ರ ಉಪನಿಷತ್‌ಸಾರ ವನ್ನೂ ಧರ್ಮಸೂತ್ರವನ್ನೂ ಕನ್ನಡದಲ್ಲಿ ಜನತೆಯ ಕಲ್ಯಾಣಕ್ಕಾಗಿ ಬೋಧಿ ಸಿದರು.

ವೇದಗಳಿಂದ ಆರ್ಯರ ಮತವು ಯಾವ ಸ್ಥಿತಿಯಲ್ಲಿದ್ದಿತೆಂದು ತಿಳಿ ಯುತ್ತದೆ. ಉಪನಿಷತ್ತುಗಳಲ್ಲಿ ಸೃಷ್ಟಿಯ ವಿವರಗಳು ತಿಳಿಯಬರುತ್ತವೆ. ಮತವು ಆರ್ಯರ ಜೀವನದಲ್ಲಿ ಮುಖ್ಯವಾಗಿದ್ದಿತು. ಪ್ರಥಮತಃ ಅವರು ಪ್ರಕೃತಿಯ ಅದ್ಭುತ ಶಕ್ತಿಗಳನ್ನು—ಇಂದ್ರ, ಅಗ್ನಿ, ವಾಯು, ಯಮ, ವರುಣ, ವಿದ್ಯುತ್, ಮರುತ್, ಸೂರ್ಯ, ನಾಸತ್ಯ ಎಂಬ ನಾಮಧೇಯ ಗಳಿಂದ ಆರಾಧಿಸುತ್ತಿದ್ದರು. ಆತ್ಮನಿತ್ಯತೆ, ಜನನ, ಮರಣ, ಇವು ಗಳಲ್ಲಿಯೂ ನಂಬಿಕೆಯು ಬೆಳೆಯುತ್ತ, ಅನುಭವ ಹೆಚ್ಚಿದಂತೆಲ್ಲ ಅದು ದೃಢವಾಗುತ್ತ ಬಂದಿತು.

ಕೆಲವು ಕಾಲದ ನಂತರ ಮತದಲ್ಲಿ ಕೆಲವು ಬದಲಾವಣೆಗಳುಂಟಾ ದುವು. ಬ್ರಹ್ಮ, ವಿಷ್ಣು, ಮಹೇಶ್ವರರನ್ನು ವಿಗ್ರಹಸ್ವರೂಪದಲ್ಲಿ ನಿರ್ಮಿಸಿ ಆ ವಿಗ್ರಹಗಳನ್ನು ಮಂತ್ರೋಕ್ತವಾಗಿ ದೇವಾಲಯಗಳಲ್ಲಿ ಪ್ರತಿಷ್ಠಾಪಿಸಿ ಆರಾಧಿಸತಕ್ಕ ಪದ್ಧತಿಯು ಆಚರಣೆಗೆ ಬಂದಿತು. ಅವುಗಳ ಜೊತೆಗೆ ಕರ್ಮ ಕಾಂಡವೂ ಬೆಳೆದು, ವೇದೋಕ್ತ ಮತದವರು ಅವುಗಳನ್ನು ಚಾಚೂ ತಪ್ಪದೆ ಅನುಸರಿಸತೊಡಗಿದರು.

ಕ್ರಿ. ಪೂ. ೬ನೆಯ ಶತಮಾನದಲ್ಲಿ ಭರತಖಂಡದಲ್ಲಿ ಒಂದು ಮಹ ತ್ತರವಾದ ಬದಲಾವಣೆಯುಂಟಾಯಿತು. ಗೌತಮಬುದ್ಧನು ಜನ್ಮತಾಳಿ ರಾಜ್ಯವನ್ನು ತೊರೆದು, ದುಃಖದಿಂದ ಕೂಡಿರತಕ್ಕ ಜನತೆಯ ಕಷ್ಟವನ್ನು ನೀಗಿಸಿ, ಜೀವನವು ಸುಗಮವಾಗುವಂತೆ ಒಂದು ಹೊಸ ಮತವನ್ನು ಬೋಧಿಸಿದನು. ಅದು ಬೌದ್ಧಮತವೆಂದು ಖ್ಯಾತಿಯನ್ನು ಪಡೆಯಿತು. ಅಸಂಖ್ಯಾಕ ಜನರು ದೇಶವಿದೇಶಗಳಲ್ಲಿ ಈ ಮತವನ್ನವಲಂಬಿಸಿದರು. ಮರಾಶೆಯನ್ನು ತ್ಯಜಿಸಿ ನಿಷ್ಕಳಂಕ ಜೀವನವನ್ನು ಸಾಗಿಸುವದು ಮತ್ತು ಅಹಿಂಸಾ ತತ್ವವನ್ನು ಅವಲಂಬಿಸುವದು ಈ ಮತದ ಮುಖ್ಯ ಲಕ್ಷಣಗಳು. ಅಶೋಕ ಚಕ್ರವರ್ತಿಯ ಪ್ರೋತ್ಸಾಹದಿಂದ ಚೀನ, ಜಪಾನ, ಬರ್ಮಾ,

ಸಯಾಮು, ಸಿಂಹಳದ್ವೀಪ ಈ ದೇಶಗಳಲ್ಲೆಲ್ಲ ಇದು ಹರಡಿತು. ಆಗ ಭಾರತದ ಸಾಮಾಜಿಕ, ಧಾರ್ಮಿಕ ಜೀವನದಲ್ಲಿ ಮಹತ್ತರ ಬದಲಾವಣೆಯುಂಟಾಯಿತು. ಹಿಂದೂಮತವು ಈ ಮತದ ತತ್ವಗಳಿಂದ ಉತ್ತಮಗೊಂಡಿತು. ಭರತಖಂಡದಲ್ಲಿ ಮಾತ್ರವಲ್ಲದೆ ಏಷ್ಯಾಖಂಡದ ಇತರ ದೇಶಗಳಲ್ಲೂ ಬುದ್ಧನ ಸ್ಮಾರಕ ಸ್ತೂಪಗಳಿವೆ. ಆತನು ಬೋಧಿಸಿದ ತತ್ವಗಳು ಇಂದಿಗೂ ಎಲ್ಲ ಜನಾಂಗಗಳಿಗೂ ಗ್ರಾಹ್ಯವಾದವುಗಳಾಗಿವೆ.

ಇದೇ ಕಾಲದಲ್ಲಿಯೇ ಯಜ್ಞಯಾಗಾದಿಗಳಿಂದುಟಾಗುತ್ತಿದ್ದ ಪ್ರಾಣಿಹಿಂಸೆಯನ್ನು ಸಹಿಸಲಾರದೆ ಮಹಾವೀರನೆಂಬ ರಾಜನು ಜೈನಮತವನ್ನು ಸ್ಥಾಪಿಸಿ ಅಹಿಂಸೆಯ ತತ್ವವನ್ನೇ ಪರಮಧ್ಯೇಯವಾಗಿಟ್ಟುಕೊಂಡು ಬೋಧಿಸಿದನು. ಈ ತತ್ವವು ಮಹತ್ಪರಿಣಾಮವನ್ನುಂಟುಮಾಡಿ ಕ್ರಿ. ಶ. ೧೩ನೆಯ ಶತಮಾನದ ವರೆಗೂ ಪ್ರಾಬಲ್ಯದಲ್ಲಿತ್ತು. ಬೌದ್ಧಮತದ ಅನುಯಾಯಿಗಳಂತೆ ಈ ಮತದ ಅನುಯಾಯಿಗಳು ಇಂದಿಗೂ ಅದರ ತತ್ವದ ಮತ್ತು ಧರ್ಮದ ಪಾಲನೆಗಾಗಿ ಶ್ರಮಪಡುತ್ತಿದ್ದಾರೆ.

ಭರತಖಂಡದ ನಾಗರಿಕತೆಯಲ್ಲಿ ಬುದ್ಧಿಯ ಬೆಳವಣಿಗೆಯ ಕೆಲಸಗಳಿಗೂ ಬ್ರಾಹ್ಮಣ ವರ್ಣಕ್ಕೂ ನಿಕಟ ಸಂಬಂಧವಿದೆ. ಬ್ರಾಹ್ಮಣ ಸಾಹಿತ್ಯದಲ್ಲೆಲ್ಲ ಅತ್ಯಂತ ಪುರಾತನ ಸಾಹಿತ್ಯವೆಂದರೆ ವೇದವು. ಐತಿಹ್ಯದ ಪ್ರಕಾರ ವೇದಗಳನ್ನು ಬ್ರಹ್ಮನು ಋಷಿಗಳಿಗೆ ಬೋಧಿಸಿದನು. ಅವು ಒಬ್ಬರಿಂದೊಬ್ಬರಿಗೆ ಬಾಯಿಪಾಠವಾಗಿ ಬಂದವೆಂತಲೂ ವೇದವ್ಯಾಸರು ಅವುಗಳನ್ನು ಸಂಗ್ರಹಿಸಿ ನಾಲ್ಕು ಭಾಗಗಳಾಗಿ ವಿಂಗಡಿಸಿದರೆಂತಲೂ ತಿಳಿದು ಬಂದಿರುತ್ತದೆ. ಇವುಗಳಲ್ಲಿ ಸಂಹಿತೆಗಳು, ಬ್ರಾಹ್ಮಣಗಳು, ಉಪನಿಷತ್ತುಗಳು ಎಂದು ಮೂರು ಭಾಗಗಳಿವೆ. (........ಮೊದಲನೆಯದರಲ್ಲಿ ಸ್ತುತಿಗಳೂ ಬೇಡಿಕೆಗಳೂ ಮತ್ತು ಆರಾಧನೆಯ ಗೀತಗಳೂ ಎರಡನೆಯದರಲ್ಲಿ ಧಾರ್ಮಿಕ ನಿಯಮಗಳೂ ಮೂರನೆಯದರಲ್ಲಿ ತಾತ್ವಿಕ ಸಿದ್ಧಾಂತಗಳೂ ಇರುತ್ತವೆ.) ವೇದಸಾಹಿತ್ಯವು ಭಾರತೀಯರಲ್ಲಿ ಆರ್ಷೇಯವಾದುದು. ಪಾಶ್ಚಾತ್ಯ ವಿದ್ವಾಂಸರನೇಕರು ಇವನ್ನು ಅಭ್ಯಸಿಸಿ ಇದರ ಮೇಲೆ ಪ್ರತಿಭಾಯುತವಾದ ಪುಸ್ತಕಗಳನ್ನು ಬರೆದಿರುತ್ತಾರೆ. ಇವರ ಪರಿಶ್ರಮದಿಂದ

ಭಾರತೀಯರ ನಾಗರಿಕತೆಯಲ್ಲಿಯ ಅತ್ಯಮೌಲ್ಯವಾದ ಜೀವನ ಸೂತ್ರಗಳು ವಿಶ್ವಕ್ಕೆ ತಿಳಿಯಲು ಸಹಕಾರಿಯಾಗಿವೆ. ಮ್ಯಾಕ್ಸಮುಲ್ಲರವರು ಋಗ್ವೇದದ ವಿಷಯವಾಗಿ ಬಹಳ ಉತ್ತಮ ಗ್ರಂಥಗಳನ್ನು ಬರೆದಿರುತ್ತಾರೆ. ಡಾ. ವಿಂಟರನಿಟ್ಜರು ವೇದಸಾಹಿತ್ಯದ ಕಾಲವನ್ನು ನಿರ್ಧರಿಸಿರುತ್ತಾರೆ. (ದಿ ಏಜ ಆಫ್ ದಿ ವೇದ, ಪುಟ ೨೯೦--೩೦೯) ಅವರ ತೀರ್ಮಾನರೀತ್ಯಾ ಆ ಸಾಹಿತ್ಯದ ಸ್ವರೂಪವೇ ತಿಳಿಸುವಂತೆ ಆ ಕಾಲವು ಸುಮಾರು ಕ್ರಿ. ಪೂ. ೨೫೦೦ ಅಥವಾ ೩೦೦೦ದಲ್ಲಿ ಆರಂಭವಾಗಿ ಕ್ರಿ. ಪೂ. ೭೫೦ ಅಥವಾ ೫೦೦ರಲ್ಲಿ ಸಂಪೂರ್ಣವಾಯಿತೆಂದು ಅಭಿಪ್ರಾಯ. ಆದರೆ ವೇದಗಳು ನಿತ್ಯ ಅಪೌರುಷೇಯವಾದುದರಿಂದ ಅದರ ಕಾಲನಿರ್ಣಯವೆಂಬ ಪ್ರಯತ್ನವೇ ಅಸಾಧುವೆಂದು ಕೆಲವರ ಅಭಿಪ್ರಾಯವು. ವೇದಸಾಹಿತ್ಯವಲ್ಲದೆ ಇತರ ಸಂಸ್ಕೃತ ಸಾಹಿತ್ಯವನ್ನೂ ವೆಬ್ಬರ್, ವಿಲ್ಸನ್, ಬೆರಿಡೇಲ ಕೀತ್, ಲೆನಾರ್ಮಂಟ, ರಾತ್ ಮುಂತಾದವರು ಆಳವಾಗಿ ವ್ಯಾಸಂಗ ಮಾಡಿ ಭಾರತೀಯರು ಸಾಹಿತ್ಯದಲ್ಲಿ-ಪಡೆದಿರುವ ಹಿರಿಮೆಯನ್ನು-ತೋರ್ಪಡಿಸಿರುವ ಅಗಾಧ ಜ್ಞಾನವನ್ನು ಕೊಂಡಾಡಿದ್ದಾರೆ. ಈ ಅಭಿಪ್ರಾಯವನ್ನು ಕೆಳಗೆ ಕಾಣಿಸಿದ ಆಧಾರಗಳ ಮೇಲಿಂದ ಪುಷ್ಟೀಕರಿಸಲಾಗಿದೆ. ಸರ್ ವಿಲಿಯಂ ಜೋನ್ಸರವರ ಅಭಿಪ್ರಾಯದಲ್ಲಿ ಸಂಸ್ಕೃತ ಭಾಷೆಯು ಗ್ರೀಕ ಭಾಷೆಗಿಂತ ಪರಿಪೂರ್ಣವೂ ಲ್ಯಾಟಿನ್ ಭಾಷೆಗಿಂತ ಸಮೃದ್ಧವೂ ಆಗಿದೆ. ಆದರೂ ಇವೆರಡು ಭಾಷೆಗಳಿಗೆ ಕ್ರಿಯಾಪದ ವ್ಯಾಕರಣ ಇವೇ ಮೊದಲಾದ ವಿಚಾರಗಳಲ್ಲಿ ಸಾದೃಶ್ಯವಿದೆ. ಶಬ್ದಶಾಸ್ತ್ರರೀತ್ಯಾ ಇವುಗಳಿಗೆ ಸಂಬಂಧ ವಿದೆ. ಪಂಡಿತ ಜವಾಹರಲಾಲ ನೆಹರೂರವರು ಇತ್ತೀಚಿಗೆ ಬರೆದಿರುವ ' ಡಿಸ್ಕವರಿ ಆಫ್ ಇಂಡಿಯಾ" ಎಂಬ ಪುಸ್ತಕದ ೧೩೨ನೆಯ ಪುಟದಲ್ಲಿ ಸಂಸ್ಕೃತ ಭಾಷೆಯ ಸ್ಥಿರತ್ವವನ್ನೂ ಚೇತನವನ್ನೂ ವಿಮರ್ಶಿಸುತ್ತಾ ಹೀಗೆಂದಿದ್ದಾರೆ: — "ಸಂಸ್ಕೃತವು ಅತ್ಯಾಶ್ಚರ್ಯಕರವಾದ ಶಬ್ದ ಸಂಪತ್ತಿಯುಳ್ಳದ್ದೂ ಅರ್ಥಗರ್ಭಿತವಾದುದೂ ಆಗಿ ಪಾಣಿನಿಯ ವ್ಯಾಕರಣ ನಿಯಮಗಳಿಗೂ ಅನುಗುಣವಾಗಿದೆ." ಸಾರಾಂಶ, ಈ ಭಾಷೆಯ

ಸೌಂದರ್ಯ-ಸ್ವರೂಪಗಳೇ ಅದನ್ನು ವಿಶ್ವದಲ್ಲಿಯೇ ಅಪೂರ್ವ ಭಾಷೆಯ ನ್ನಾಗಿ ಮಾಡಿವೆ.

ಮನುಧರ್ಮಶಾಸ್ತ್ರವು ಬ್ರಹ್ಮನ ಮೊಮ್ಮಗನಾದ ಮನುವಿಗೆ ಬ್ರಹ್ಮನು ಉಪದೇಶಿಸಿದ ಗ್ರಂಥವೆಂದು ತಿಳಿಯಲಾಗಿದೆ. ಈ ಗ್ರಂಥವು ಹಿಂದೂ ಸಮಾಜದ ರೀತಿನೀತಿಗಳಿಗೂ ಆಚಾರ ವ್ಯವಹಾರಗಳಿಗೂ ಸಮಾಜ ವ್ಯವ ಹಾರಗಳಿಗೂ ಆಧಾರವಾಗಿದೆ. ಇದರಂತೆ ರಾಮಾಯಣ ಮಹಾಭಾರತ ಗಳೆಂಬ ಮಹಾಕಾವ್ಯಗಳು ದೈವಪ್ರೇರಣೆಯಿಂದ ರಚಿತವಾದ ಗ್ರಂಥಗ ಳೆಂದು ತಿಳಿಯಲ್ಪಟ್ಟಿವೆ. ಮಹಾಭಾರತವನ್ನು ಐದನೆಯ ವೇದವೆಂದು ಭಾವಿಸಿರುತ್ತಾರೆ. ಇದಲ್ಲದೆ ಈ ಸಾಹಿತ್ಯದಲ್ಲಿ ಇನ್ನೂ ಅನೇಕ ಕಾವ್ಯಗಳೂ ನಾಟಕಗಳೂ ಕಾದಂಬರಿಗಳೂ ಬರೆಯಲ್ಪಟ್ಟಿವೆ. ಕಾಳಿದಾಸ, ಭಾಸ, ಭವಭೂತಿ ಮುಂತಾದ ಕವಿಗಳು ತಮ್ಮ ಕಾವ್ಯರಚನೆಯಲ್ಲಿ ವಿಶಾಲವಾದ ಜ್ಞಾನವನ್ನೂ ಪಾಂಡಿತ್ಯವನ್ನೂ ತೋರಿಸಿದ್ದಾರೆ ಕವಿರತ್ನ ಕಾಳಿದಾಸನ ಶಾಕುಂತಲ ನಾಟಕವನ್ನು ಓದಿ ಬೆರಗಾಗಿ ಪಾಶ್ಚಾತ್ಯರು ಆತನಿಗೆ ಶೇಕ್ಸ-ಪೀಯರ ಕವಿಯ ಸ್ಥಾನಗೌರವಗಳನ್ನು ಕೊಟ್ಟಿದ್ದಾರೆ.

ಭಾರತೀಯರು ಧ್ಯಾನ ವೇದಾಂತದಲ್ಲಿ ಎಲ್ಲರಿಗಿಂತಲೂ ಮುಂದು ವರಿದಿದ್ದರು. ಭಗವದ್ಗೀತೆಯಲ್ಲಿರತಕ್ಕ ಶ್ರೀ ಕೃಷ್ಣಾರ್ಜುನ ಸಂವಾದವು ಒಂದು ವೇದಾಂತ ತತ್ವದ ಸಂಪೂರ್ಣತೆಯನ್ನು ತಿಳಿಸುತ್ತದೆ. ಅನೇಕ ತತ್ವಗಳಿಗೆ ಭಾರತಭೂಮಿಯು ಉಗಮ ಸ್ಥಾನವಾಗಿದೆ. ಬೌದ್ಧಮತ, ಜೈನಮತದ ತತ್ವಗಳು ವಿಶ್ವದಲ್ಲಿ ಕೆಲಕಾಲ ಜಾಗೃತಿಯನ್ನುಂಟು ಮಾಡಿದವು.

ಭಾರತೀಯರಿಗೆ ಪ್ರಾಚೀನ ಕಾಲದಲ್ಲಿ ದಶಮಾಂಶ ಪದ್ಧತಿಯು ಮೊದಲೇ ಗೊತ್ತಿತ್ತು. ಸಮುದ್ರದ ಮೇಲೆ ನೌಕೆಗಳಲ್ಲಿ ವ್ಯಾಪಾರ ನಡೆಸು ವದು ಅವರಿಗೆ ತಿಳಿದಿತ್ತು.

ವಿವಿಧ ಜನಾಂಗಗಳಿಗೆ ಆಶ್ರಯವಿತ್ತ ವಿವಿಧ ತತ್ವಗಳ ಜನ್ಮಭೂಮಿಯಾದ ಭಾರತದ ಕಲೆಯಲ್ಲಿಯೂ ವೈಶಿಷ್ಟ್ಯವಿದೆ. ವೈವಿಧ್ಯವಿದೆ. ಇಲ್ಲಿಯ ಜನರ

ಮತವು ಶಿಲ್ಪಕಲೆ ಮತ್ತು ವಾಸ್ತುಶಿಲ್ಪದ ಅಭಿವೃದ್ಧಿಗೆ ಕಾರಣವಾಯಿತೆಂದಲ್ಲಿ ತಪ್ಪಾಗದು. ದೇಶದಾದ್ಯಂತವೂ ಇದ್ದ ಸುಂದರವೂ ಅದ್ಭುತವೂ ಕಲಾವೈವಿಧ್ಯತೆಯಿಂದ ಕೂಡಿದವೂ ಆದ ದೇವಾಲಯಗಳು, ಮತ್ತು ಸ್ಮಾರಕಗಳು ಇಂದಿಗೂ ಜಗತ್ತನ್ನೇ ಮುಗ್ಧಗೊಳಿಸುವಂತಹ ಕಲಾವಸ್ತುಗಳಾಗಿವೆ. ಕೆಲವೆಡೆಗಳಲ್ಲಿ ಅಚ್ಚಳಿಯದೆ ಈಗಲೂ ಇದ್ದು ಕಲೆಯ ಸೊಬಗನ್ನು ಬೆಳಗುತ್ತಿವೆ ನಾಗರಿಕ ಮನುಷ್ಯನು ಸೌಂದರ್ಯೋಪಾಸಕ. ಸಾಹಿತ್ಯದಲ್ಲಿ ಭಾವನೆಗಳ ಸೌಂದರ್ಯವನ್ನು ತೋರಿಸುವಂತೆ ಕಲಾವಸ್ತುಗಳಲ್ಲಿಯೂ ಆ ಸೌಂದರ್ಯವನ್ನು, ಆ ಕುಶಲತೆಯನ್ನು ತೋರಿಸುವದು ಸಹಜ. ಎಲ್ಲೋರಾ ಮತ್ತು ಅಜಂತಾದಲ್ಲಿಯ ಗುಹಾಂತರ್ಗತ ದೇವಾಲಯಗಳು ಕಲಾಕೌಶಲ್ಯದಿಂದ ಕೂಡಿ ಪಾಶ್ಚಾತ್ಯರನ್ನು ಮುಗ್ಧಗೊಳಿಸಿವೆ. ಶ್ರವಣಬೆಳಗೊಳದಲ್ಲಿ ಒಂದೇ ಶಿಲೆಯಲ್ಲಿ ನಿರ್ಮಿಸಿದ ಗೋಮಟೇಶ್ವರ ವಿಗ್ರಹವು ಸೌಂದರ್ಯದ ಸಂಕೇತವಾಗಿವೆ. ಕಲೆಯ ಪರಮಾವಧಿ ಎಂದರೂ ತಪ್ಪಾಗದು. ತತ್ವಜ್ಞಾನಿಗಳು ಸೌಂದರ್ಯ ಭಾವನೆಗಳನ್ನು ಬೋಧನೆಗಳಲ್ಲಿ ತೋರಿಸಿದರು.

ವಿಜ್ಞಾನದಲ್ಲೂ ಭಾರತದಲ್ಲಿ ಪ್ರಗತಿಯುಂಟಾಗಿತ್ತು. ಆರ್ಯಭಟ್ಟ, ವರಾಹಮಿಹಿರ ಇವರುಗಳು ಸೂರ್ಯಸಿದ್ಧಾಂತವನ್ನು ಕಂಡು ಹಿಡಿದರು. ಚರಕ, ಸುಶ್ರುತರು ಆಯುರ್ವೇದದಲ್ಲಿ ಪ್ರವೀಣರಾಗಿದ್ದರು. ಶಸ್ತ್ರ ಚಿಕಿತ್ಸೆಯನ್ನೂ ಇವರು ಅರಿತಿದ್ದರು. ಹೀಗೆ ಭಾರತವು ಪ್ರಾಚೀನ ಕಾಲದಲ್ಲಿ ಸರ್ವತೋಮುಖವಾಗಿ ಪ್ರಗತಿಯನ್ನು ಪಡೆದಿತ್ತು.

ಮೇಲೆ ವಿವರಿಸಿದ ಅಂಶಗಳನ್ನು ವಿಚಾರಮಾಡಿದಲ್ಲಿ ಭಾರತೀಯರ ಸಂಸ್ಕೃತಿಯು, ನಾಗರಿಕತೆಯು ಪ್ರಪಂಚದ ಎಲ್ಲ ಜನಾಂಗಗಳಿಗಿಂತ ಮಿಗಿಲಾದುದೆಂದು ಹೇಳಬಹುದು. ಇತರ ನಾಗರಿಕತೆಗಳ ಮೇಲೆ ಭಾರತವು ತನ್ನ ಪ್ರಭಾವವನ್ನು ಬೀರಿದೆ. ಲಲಿತಕಲೆ, ತತ್ವಶಾಸ್ತ್ರ, ಗಣಿತ, ಜ್ಯೋತಿಷ್ಯ, ಖಗೋಳ, ಆಯುರ್ವೇದ ಮುಂತಾದ ಸಕಲಶಾಸ್ತ್ರಗಳಲ್ಲಿಯೂ ಭಾರತೀಯರು ನಾಗರಿಕತೆಯ ಮುನ್ನಡೆಯಲ್ಲಿ ಅಗ್ರಗಾಮಿಗಳು. ಭಾರತದ ಸಾಹಿತ್ಯವು ಪುರಾತನವೂ ಪರಿಪೂರ್ಣವೂ ಆದುದು. ಭಾರತದ ಧರ್ಮವು

ವೈಶಾಲ್ಯತೆಯಿಂದಲೂ ಸಹನತೆಯಿಂದಲೂ ಕೂಡಿದುದು. ಅನೇಕ ಜನಾಂಗಗಳಿಗೆ ಆಶ್ರಯ ಕೊಟ್ಟರೂ ಭಾರತದ ಧರ್ಮವು, ತತ್ವವು, ಮತ್ತು ನೀತಿಯು ಕೆಟ್ಟಿಲ್ಲ.

ಡಾ. ಭಾಂಡಾರಕರರ ಅಭಿಪ್ರಾಯದಂತೆಃ— "ಬೇರೆ ಬೇರೆ ಕಾಲಗಳಲ್ಲಿ ಬಹಳ ಬಗೆಯ ಜಾತಿ-ಪಂಗಡದವರು ತಮ್ಮದೇ ಆದ ಸಂಸ್ಕೃತಿಯೊಂದಿಗೆ ಭಾರತವನ್ನು ಪ್ರವೇಶಿಸಿದರು. ಆರ್ಯರು, ಅಸುರರು ಗರ್ಜರರು, ಮೊಗಲರು, ಕಡೆಗೆ ಇಂಗ್ಲೀಷರೇ ಮೊದಲಾದವರು ತಮ್ಮ ಪಾಶ್ಚಾತ್ಯ ಸಂಸ್ಕೃತಿಯೊಂದಿಗೆ ಇಲ್ಲಿಗೆ ಬಂದರು. ಈ ವಿವಿಧ ಪಂಗಡದವರು ಭಾರತೀಯರ ಮೇಲೆ ತಮ್ಮ ವಿಚಾರ-ಭಾವನೆಗಳನ್ನು ಕಾಲಕಾಲಕ್ಕೆ ಮೂಡಿಸಿದರು. ಆದರೆ ಶಾಶ್ವತವೂ ಮಾನುಷಿಕವೂ ಆದ ವಿಚಾರಾಂಶಗಳನ್ನು ವಿವೇಕದಿಂದ ಆರಿಸಿ, ಒಂದಾಗಿ ಹೊಂದುಗೂಡಿಸಿಕೊಳ್ಳುವಲ್ಲಿ ಭಾರತೀಯರ ರಾಷ್ಟ್ರೀಯ ಬುದ್ಧಿ ವೈಶಿಷ್ಟ್ಯವು ತೋರದಿರಲಿಲ್ಲ—ತೋರಿಯೇ ತೋರಿತು." (ಮದ್ರಾಸದಲ್ಲಿ ೨೪—೨—೧೯೩೯ರಲ್ಲಿ ಕೊಟ್ಟ "ಪ್ರಾಚೀನ ಭಾರತ ಸಂಸ್ಕೃತಿಯ ಕೆಲವು ದೃಷ್ಟಿಗಳು" ಎಂಬ ಉಪನ್ಯಾಸದ ಮೇಲಿಂದ) ಎಂದು ಉಲ್ಲೇಖಿತವಾಗಿದೆ.

ಈ ಎಲ್ಲ ಮಾತುಗಳಿಂದ ಭಾರತದ ನವೋದಯವು ಯಾವ ಆಧಾರದ ಮೇಲೆ ಉಂಟಾಗಬೇಕೆಂಬುದನ್ನು ವಾಚಕರು ಊಹಿಸಬಹುದು.



# ೮ ಇರಾಣಿನ ನಾಗರಿಕತೆ

ಇಂಡಿಯಾದಂತೆ ಇರಾಣಿನ ನಾಗರಿಕತೆಯೂ ಪುರಾತನವಾದುದು. ಬಾಕ್ಟ್ರಿಯಾದವರೂ ಮಿಡಿಯಾದ ಜನರೂ ಸಾಧಿಸಿದ ನಾಗರಿಕತೆಯೂ ಈ ದೇಶಕ್ಕೆ ಸೇರಿದುದು. ಪ್ರಾಚೀನ ಇರಾಣವೇ ಈಗಿನ ಪರ್ಶಿಯಾ ದೇಶವು. ಮೇಲಿನ ಈ ಮೂರು ದೇಶದವರೂ ಪ್ರಾಮುಖ್ಯವಾದ ಆರ್ಯರ ಸಂತತಿಗೆ ಸೇರಿದವರು. ಆ ಸಂತತಿಯ ಒಂದು ಪಂಗಡವು ಇರಾಣದಲ್ಲಿ ನೆಲೆಸಿತು. ಆದಕಾರಣ ಪೌರ್ವಾತ್ಯ ನಾಗರಿಕತೆಯಲ್ಲಿ ಆ ಜನರನ್ನು ಇರಾಣಿಯರೆಂದು ಕರೆಯುವದು ಸ್ವಾಭಾವಿಕವಾಗಿದೆ. ಚೀನ, ಇಂಡಿಯಾದವರಿಗಿಂತ ಇರಾಣಿಯವರಿಗೆ ಪರದೇಶದವರ ಸಂಪರ್ಕ ಹೆಚ್ಚಾಗಿ ಆದಕಾರಣ ಅವರ ಚರಿತ್ರೆಯನ್ನು ತಿಳಿಯಲು ಹೊರಗಿನವರು ಬರೆದ ಆಧಾರಗಳು ಸಾಕಷ್ಟು ದೊರೆತಿವೆ. ವೇದದಿಂದ ಭಾರತದ ಆರ್ಯರ ನಾಗರಿಕತೆಯು ತಿಳಿದು ಬರುವಂತೆ ಇರಾಣಿಯರ (ಪಾರಸಿಕರ) ಶ್ರೇಷ್ಠಮತ ಗ್ರಂಥವಾದ ಝೆಂಡಾವೆಸ್ತಾದಿಂದ ಅವರ ಜಾತಿಯ ಪದ್ಧತಿಗಳು ತಿಳಿಯಬರುತ್ತವೆ. ಗ್ರೀಸ ದೇಶದ ಅರಸನಾದ ಅಲೆಗ್ಝಾಂಡರನು ಈ ದೇಶವನ್ನು ಜಯಿಸಿ ಗ್ರೀಕರ ನಾಗರಿಕತೆಯ ಸಂಪರ್ಕವುಂಟುಮಾಡಿದಾಗ್ಯೂ ಅದು ತನ್ನ ಪ್ರಾಚೀನ ಪದ್ಧತಿಯ ವೈಶಿಷ್ಟ್ಯಕ್ಕೆ ಚ್ಯುತಿಬಾರದ ರೀತಿಯಲ್ಲಿ ಶ್ರೇಷ್ಠತೆಯನ್ನುಳಿಸಿಕೊಂಡಿದೆ. ಸುಪ್ರಸಿದ್ಧ ಗ್ರೀಕ ಚರಿತ್ರಕಾರನಾದ ಹೆರಡೋಟಸನ ಬರೆವಣಿಗೆಯಿಂದ ಈ ದೇಶದ ನಾಗರಿಕತೆಯನ್ನು ತಿಳಿಯಲು ಸಾಧ್ಯವಾಗಿದೆ. ಝೆಂಡಾವೆಸ್ತಾದಲ್ಲಿ ಆರ್ಯರು ಇರಾಣಿನಲ್ಲಿ ನೆಲೆಸಿ ಉಂಟುಮಾಡಿದ ಬದಲಾವಣೆಗಳ ವಿಚಾರವಾಗಿ ವಿಶೇಷವಾದ ಐತಿಹ್ಯವಿದೆ. ವೇದ ಮತ್ತು ಅವೆಸ್ತಾಗಳನ್ನು ಒಂದೇ ಬುಗ್ಗೆಯಿಂದ ಹರಿದಿರುವ ಎರಡು ನದಿಗಳೆಂದು ಕೆಲ ವಿದ್ವಾಂಸರು ಅಭಿಪ್ರಾಯ ಪಟ್ಟಿರುವರು.

ಇರಾಣಿಯರ ನಾಗರಿಕತೆಯಲ್ಲಿ ಪ್ರಾಯಶಃ ಅವರ ಮತ ತತ್ವಗಳಿಗೆ ವಿಶೇಷ ಮಾನ್ಯತೆಯು ದೊರೆಯಬೇಕಾಗುತ್ತದೆ. ಅವರ ಮತದ ತತ್ವಗಳಲ್ಲಿ ಕೆಲವು ವೈಶಿಷ್ಟ್ಯಗಳಿವೆ. ಪ್ರಪಂಚದ ಸೃಷ್ಟಿ ಲಯಗಳ ಬಗ್ಗೆ ಅವರಿಗೆ ಪ್ರಬಲ ನಂಬಿಕೆಗಳಿವೆ:— "ಪ್ರಪಂಚದಲ್ಲಿ ಒಳಿತು, ಕೆಡಕು ಎಂದು ಗುಣವಿಭಾಗವಿದೆ. ಇದು ನೈತಿಕ ಪ್ರಾಕೃತಿಕ-ವಸ್ತು ಮತ್ತು ವಿಷಯಗಳಿಗೆ ಮೂಲ ತತ್ವವಾಗಿ ಅನ್ವಯಿಸುತ್ತದೆ. ಇವೆರಡಕ್ಕೂ ಸೃಷ್ಟಿಕರ್ತನು ಪ್ರತ್ಯೇಕನಾಗಿದ್ದಾನೆ. ಸದ್ಗುಣಗಳ ಸೃಷ್ಟಿಕರ್ತನೂ ಪಾಲಕನೂ ಅವುಗಳ ಸ್ವರೂಪನೇ ಆದ ದೈವತ್ವವನ್ನು ಪಡೆದ ಆರ್ಮಸ್ಟ್. ಆ ದೈವಿಕ ಪುರುಷನ ಪ್ರಪಂಚವೇ ಬೆಳಕು. ಸದ್ಗುಣ ಸಮೂಹವೇ ಆ ಪ್ರಪಂಚಕ್ಕೆ ಸೇರಿದುದು. ಇದರಿಂದ ಬೇರೆಯಾದ ದುರ್ಗುಣ ಸ್ವರೂಪ, ಅವುಗಳ ಮೇಲಿನ ಅಧಿಕಾರವು ಅಹ್ರಿಮಾನನಿಗೆ ಸೇರಿದುದು. ಆತನ ಪ್ರಪಂಚವು ಕತ್ತಲೆಯಿಂದ ಕೂಡಿದುದು, ಅಥವಾ ಅದರ ಸ್ವರೂಪವೇ. ಪ್ರಪಂಚದಲ್ಲಿ ಎರಡು ಪ್ರಮುಖವಾದ ಮತ್ತು ಪರಸ್ಪರ ವಿರುದ್ಧವಾದ ಶಕ್ತಿಗಳುಂಟು. ಸತ್ಯ-ಅಸತ್ಯ, ಒಳ್ಳೆಯದು-ಕೆಟ್ಟದು, ಜನನ-ಮರಣ, ಸೋಲು-ಗೆಲುವು, ಇವೆರಡಕ್ಕೂ ಯಾವಾಗಲೂ ಹೋರಾಟವುಂಟು." (ಡಾ. ಲಿಒನಾರ್ಡರ ಪ್ರಾಚೀನ ಇತಿಹಾಸ ಪುಟ. ೫೨).

ಕೆಟ್ಟಶಕ್ತಿಯು-ದುರ್ಗಣಗಳು ಸದ್ಗುಣಗಳೊಂದಿಗೆ ·ಹೋರಾಡುತ್ತವೆ. ಒಳ್ಳೆಯದು ಒಳ್ಳೆಯತನವನ್ನುಳಿಸಿಕೊಳ್ಳಲು ಯತ್ನಿಸುತ್ತದೆ. ಸಾವಿಗೆ ಜೀವದೊಡನೆ ಹೋರಾಟ. ಈ ರೀತಿಯಾಗಿ ಪ್ರಪಂಚದ ಸೃಷ್ಟಿಯಲ್ಲಿ ಇದೆ. ಸೃಷ್ಟಿಗೊಳಪಟ್ಟ ಶಕ್ತಿ, ಗುಣ, ವ್ಯಕ್ತಿಗಳಿಗೆ, ಪರಸ್ಪರ ಹೋರಾಟವಿದೆ. ಆದರೂ ಸೃಷ್ಟಿನಿಯಮದಂತೆ ಸತ್ಯಕ್ಕೇ ಜಯವು. ಕೆಟ್ಟಶಕ್ತಿಗಳು—ಕೆಟ್ಟವರು—ಕೂಡ ಒಳ್ಳೆಯವರಾಗಿ ಮುಕ್ತಿಯನ್ನು ಪಡೆಯುತ್ತಾರೆ. ಸೃಷ್ಟಿಯ ಈ ರೀತಿಯ ದೈವಿಕ ಪ್ರಪಂಚದವರೇ ರಾಜರಾಗತಕ್ಕವರು.

ಕೆಲವರು ಮೇಲೆ ವಿವರಿಸಿದ ದ್ವಿವಿಧವಾದ ಪಾರಮಾರ್ಥಿಕ ಪದ್ಧತಿಯನ್ನು ಏಷ್ಯಾದ ವಿವಿಧ ಪಾರಮಾರ್ಥಿಕ ಪದ್ಧತಿಗಳಿಗಿಂತ (ಭಾವನೆಗಳು) ಉತ್ತಮವಾದವುಗಳೆಂದು ಅಭಿಪ್ರಾಯ ಪಡುತ್ತಾರೆ. ಈ ಮತದ ತತ್ವಗಳು

ಎಲ್ಲ ಮತಗಳ ಮೂಲ ತತ್ವವಾಗಿವೆ. ಭಾರತೀಯರ ಮತತತ್ವಗಳಲ್ಲಿಯ ಕರ್ಮ, ಜ್ಞಾನ, ಮೋಕ್ಷ, ಜನ್ಮಾಂತರಗಳು ಆ ತತ್ವಕ್ಕೆ ವಿರುದ್ಧವಲ್ಲ, ಭಿನ್ನವಲ್ಲ. ಇರಾಣಿಯರು ಸೃಷ್ಟಿಯ ದೈವಿಕ ಶಕ್ತಿಗಳನ್ನು ಆರಾಧಿಸುತ್ತಿದ್ದರು. ಪರಿಶುದ್ಧತೆಯನ್ನು ಪಡೆಯಲು ಸನ್ಮಾರ್ಗದಲ್ಲಿ ನಡೆಯಲು ಸದ್ಭಾವನೆಗಳಿಂದ ಕೂಡಿರಲು ಸಹಕಾರಿಗಳೆಂದು ಅವರು ಬೆಳಕನ್ನೂ ಬೆಂಕಿಯನ್ನೂ ಪೂಜಿಸುತ್ತಾರೆ. ಈ ಪದ್ಧತಿಯು ವೇದೋಕ್ತ ಮತಗಳಲ್ಲಿ ತಿಳಿಸಿರತಕ್ಕ ಪದ್ಧತಿಗಿಂತ ಬೇರೆ ಅಲ್ಲ. ಆದಿಯಲ್ಲಿ ಮತದ ಮೂಲತತ್ವಗಳು ಒಂದೇ ಆಗಿದ್ದು, ಕ್ರಮೇಣ ಕೆಲವು ಬದಲಾವಣೆಗಳನ್ನು ಹೊಂದಿದವು. ಎಂದರೆ ತಪ್ಪಾಗದು. ಇದಲ್ಲದೆ ಇರಾಣಿಯರ ಮತರೀತ್ಯಾ ಮನುಷ್ಯನು ಭಾವನೆ ಮಾತು ಕೆಲಸುಗಳಲ್ಲಿ (ಕಾಯ ವಾಚ ಮನಸುಗಳಲ್ಲಿ) ಪರಿಶುದ್ಧನಾಗಿರಬೇಕೆಂದೂ ಅಂತಿರುವ ಅವನು ಅಶುದ್ಧವಾದೆಲ್ಲವುಗಳಿಂದ ದೂರನಾಗಿರಬೇಕೆಂದೂ ಅವರ ಮುಖ್ಯ ಮತನಿಯಮ. ಮೃತಶರೀರವನ್ನು (ಪ್ರಾಣಿ ಮನುಷ್ಯರದಾದರೂ ಮುಟ್ಟುವದು ಅಪವಿತ್ರವಾದುದೆಂದು ಅವರ ಮತ. ಆದ್ದರಿಂದಲೇ ಅವರು ಮೃತಶರೀರಕ್ಕೆ ಭೂಮಿ ಬೆಂಕಿಗಳ ಸಂಪರ್ಕವನ್ನು ಮಾಡಿಸುವದಿಲ್ಲ. ಝೆಂಡಾವೆಸ್ತಾದಿಂದ ಇರಾಣಿಯರಲ್ಲಿ ನಾಲ್ಕು ಪಂಗಡ ಅಥವಾ ಜಾತಿಗಳು ಇದ್ದವೆಂದು ತಿಳಿಯಬರುತ್ತದೆ ಪುರೋಹಿತರು, ಸೈನಿಕರು, ಬೇಸಾಯಗಾರರು, ವ್ಯಾಪಾರಸ್ಥರು ಎಂದು ನಾಲ್ಕು ಬಗೆಯ ಜಾತಿಗಳಿದ್ದವು. ಆದರೆ ಭಾರತದಲ್ಲಿಯಂತೆ ಈ ಜಾತಿಯ ಕಟ್ಟುಗಳು ಬಲಪಡಲಿಲ್ಲ.

ಇರಾಣಿಯರ ಪುರಾತನ ಚರಿತ್ರೆಯನ್ನು ತಿಳಿಯಲು ಝೇಂಡಾ-ಅವೆಸ್ತದ ಆಧಾರವೊಂದೇ ಸಾಲದು. ಯಾಕಂದರೆ ಅದು ಸಂಪೂರ್ಣವಾದ ಐತಿಹ್ಯದಿಂದ ಕೂಡಿದೆ. ಪರ್ಶಿಯಾ ದೇಶದ ಮಧ್ಯಕಾಲಕ್ಕೆ ಸೇರಿದ ಫಿರ್ದೂಸಿಯೆಂಬ ಕವಿಯು ಷಾನಾಮಾ ಎಂಬ ದೊಡ್ಡ ಮಹಾಕಾವ್ಯದಲ್ಲಿ ಪುರಾತನ ಪರ್ಶಿಯನರು ಸಾಧಿಸಿದ ಮಹತ್ಕಾರ್ಯಗಳೆಲ್ಲವನ್ನು ಸೇರಿಸಿ ಒಂದು ಗ್ರಂಥವನ್ನು ಬರೆದಿದ್ದಾನೆ. ಗ್ರೀಕರು ಈ ದೇಶದ ಚರಿತ್ರೆಯನ್ನು ಬರೆದಿರುವ ಕೆಲವು ವಿಷಯಗಳ ಸತ್ಯಾನ್ವೇಷಣಕ್ಕೆ ಇದು ಆಧಾರಭೂತವಾಗಿದೆ. ಆದರೂ ಕೆಲವು ಕಾಲದ ನಿರ್ದಿಷ್ಟ ವಿವರಗಳು

ತಿಳಿದಿಲ್ಲ. ಪರ್ಶಿಯಾ ದೇಶದ ಜನರ ಚರಿತ್ರೆಯಲ್ಲಿ ಝೋರಾಸ್ಟರ ಅಥವಾ ಝೋರಡುಸ್ಟನಂತಹ ಸುಪ್ರಸಿದ್ಧ ಶಾಸನಕರ್ತನ ಚರಿತ್ರೆ ಮುಖ್ಯ ವಾದುದು. ಈ ಮಹಾನುಭಾವನು ಪರ್ಶಿಯನರ ಚರಿತ್ರೆಯಲ್ಲಿ ಕಾನ್ ಫ್ಯೂಷಿಯಸ್, ಮನು, ಡ್ರೇಕನ್ ಇವರಷ್ಟೇ ಪ್ರಖ್ಯಾತನು. ಈತನು ಜೀವಿಸಿದ ಕಾಲದ ವಿಚಾರವಾಗಿ ಪಂಡಿತರಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವು ಗ್ರೀಕ ಚರಿತ್ರೆಕಾರರು ಈತನು ಕ್ರಿ. ಪೂ. ೬ನೆಯ ಶತಮಾನದಲ್ಲಿದ್ದ ನೆಂತಲೂ ಮತ್ತೆ ಕೆಲವರು ಕ್ರಿ. ಪೂ. ೧೦೦೦ರಲ್ಲಿದ್ದನೆಂತಲೂ ಅಭಿ ಪ್ರಾಯಪಡುತ್ತಾರೆ. ಝೇಂಡಾವೆಸ್ತದಿಂದ ಈತನು ಪರ್ಶಿಯಾದ ದೇಶದ ಮತೀಯ ಪದ್ಧತಿಗಳನ್ನು ಸಂಪೂರ್ಣಗೊಳಿಸಿದ ಒಬ್ಬ ಮತಾಚಾರ್ಯ Prophet ನೆಂದು ತಿಳಿದು ಬರುತ್ತದೆ.

ಗ್ರೀಕರ ಬರೆವಣಿಗೆಗಳ ರೀತ್ಯಾ ಇರಾಣಿಯರ ಸಾಮ್ರಾಜ್ಯದಲ್ಲಿ ಬಾಕ್ಟ್ರಿಯಾ ದೇಶವು ಬ್ಯಾಕ್ಟ್ರಾ ಎಂಬ ರಾಜಧಾನಿಯನ್ನು ಹೊಂದಿ ಬಹಳ ಪುರಾತನವಾಗಿತ್ತು. ಅಲೆಕ್‌ಝಾಂಡರನು ಈ ದೇಶವನ್ನು ಕ್ರಿ. ಪೂ. ೩೨೯ರಲ್ಲಿ ಗೆದ್ದನೆಂದೂ ಇಲ್ಲಿ ತನ್ನ ಮುಖಂಡರನ್ನು ನಿಯಮಿಸಿದ್ದನೆಂದೂ ತಿಳಿಯಬರುತ್ತದೆ.

ಇರಾಣದ ಪಶ್ಚಿಮಕ್ಕಿರುವ ಮಿಡಿಯಾ ಎಂಬ ದೇಶದಲ್ಲಿ ಕೆಲವರು ನೆಲೆಸಿದ್ದರು. ಅಲ್ಲಿಯ ವಾಯು ಭೂಗುಣಗಳು ಬಹಳ ಚನ್ನಾಗಿದ್ದವು. ಇಂದು ಅಲ್ಲಿ ಈ ಅನುಕೂಲಗಳಿಲ್ಲ. ಈ ದೇಶದಲ್ಲಿ ಹಿಂದೆ ನೆಲೆಸಿದ್ದ ಜನರು ಅಸ್ಸೀರಿಯಾ ದೇಶದ ಜನರಿಂದ ಸೋಲಿಸಲ್ಪಟ್ಟು ಆರು ಶತಮಾನಗಳ ವರೆಗೆ ಅವರ ಆಡಳಿತಕ್ಕೆ ಒಳಗಾಗಿದ್ದರು. ಕೆಲವು ಕಾಲಾನಂತರ ಮಿಡಿಯಾ ದೇಶದ ಜನರು ಸ್ವಾತಂತ್ರ್ಯವನ್ನು ಗಳಿಸಿ ತಮ್ಮದೇ ಆದ ಒಂದು ನಾಗ ರಿಕತೆಯನ್ನು ಬೆಳಿಸಿದರು. ಇವರ ರಾಜಕೀಯದಲ್ಲಿ ರಾಜತ್ವದ ಪದ್ಧತಿ ಯಿದ್ದಿತು. ಡಿಯೋಸಿಸ್ ಎಂಬ ರಾಜನು ಕ್ರಿ. ಪೂ. ೭೮೯ರಿಂದ ೬೫೮ರ ವರೆಗೆ ಆಳಿದನು. ಆತನು ಎಗ್ಬಟಾನಾ ರಾಜಧಾನಿಯನ್ನು ಕಟ್ಟಿದನು. ಈ ದೇಶಕ್ಕೂ ಅಸ್ಸೀರಿಯಾ ದೇಶಕ್ಕೂ ಆಗಾಗ ಹೋರಾಟಗಳಾಗುತ್ತಿದ್ದವು.

ಡಿಯೋಸಿಸ್‌ನ ಮೊಮ್ಮಗನಾದ ಸೈಯಾಕ್ಸೆರಿಸ್‌ನು ಕ್ರಿ. ಪೂ. ೬೨೫ರಿಂದ ೫೮೫ರ ವರೆಗೆ ಆಳಿದನು. ಈತನು ಬ್ಯಾಬಿಲೋನಿಯಾ ದೇಶದ ರಾಜನಾದ ನಬೋಪೋಲಾಸ್ಸರನೊಡನೆ ಮಿತ್ರತ್ವವನ್ನು ಬೆಳಸಿ, ತನ್ನ ತಂದೆಯ ಮೇಲಿನ ಸೇಡನ್ನು ತೀರಿಸಿಕೊಳ್ಳಲು ಅಸ್ಸೀರಿಯಾ ದೇಶದ ರಾಜಧಾನಿಯಾದ ನಿನೇವೆಯನ್ನು ನಾಶಗೊಳಿಸಿದನು. ಸೈಯಾಕ್ಸೆರಿಸನ ಸಾಮರ್ಥ್ಯದಿಂದ ಅಸ್ಸೀರಿಯಾ, ಪರ್ಶಿಯಾ, ಮೀಡಿಯಾ ಇವುಗಳನ್ನು ಮೀಡಿಯಾ ಆಡಳಿತಕ್ಕೆ ಸೇರಿಸಿದನು.

ಮೀಡಿಯಾ ದೇಶದಲ್ಲಿ ಆಳಿದವರಲ್ಲಿ ಅಸ್ಟಿಯಾಗೀಸ ಎಂಬಾತನೇ ಕಡೆಯ ದೊರೆಯು. ಈತನ ಆಳಿಕೆಯಲ್ಲಿ ಆಶ್ರಿತರಾಗಿದ್ದ ಪರ್ಶಿಯನರು ದಾಸ್ಯವನ್ನು ಕೊನೆಗಾಣಿಸಿ ಪರ್ಶಿಯಾ ಚಕ್ರಾಧಿಪತ್ಯವನ್ನು ಕ್ರಿ. ಪೂ. ೫೫೦ರಲ್ಲಿ ಸ್ಥಾಪಿಸಿದರು. ಸೈರಸನೆಂಬಾತನೇ ಪರ್ಶಿಯಾ ಸಾಮ್ರಾಜ್ಯ ಸ್ಥಾಪಕನು. ಆದುದರಿಂದ ಮೀಡಿಯಾ ದೇಶದ ಅಧೀನಕ್ಕೊಳಗಾಗಿದ್ದ ರಾಷ್ಟ್ರಗಳು ಪರ್ಶಿಯಾಕ್ಕೆ ಅಧೀನವಾದವು. ಸೈರಸ ದೊರೆಯು ೩೦ ವರುಷಗಳಷ್ಟು ಕಾಲ ಯಶಸ್ಸಿನಿಂದಲೂ ಸಾಮರ್ಥ್ಯದಿಂದಲೂ ರಾಜ್ಯವಾಳಿ ಪರ್ಶಿಯಾ ಚಕ್ರಾಧಿಪತ್ಯವನ್ನು ಪಶ್ಚಿಮ ತೀರದವರೆಗೆ ವಿಸ್ತಾರಗೊಳಿಸಿದನು. ಇದಲ್ಲದೆ ಲಿಡಿಯಾ ರಾಜನಾದ ಕ್ರೊಸಸ್ ಮತ್ತು ಬ್ಯಾಬಿಲೋನಿಯಾ ರಾಜನಾದ ನೆಬೊನ್ನಿಡಸ್‌ನೊಡನೆಯೂ ಯುದ್ಧಮಾಡಿ ಜಯಿಸಿ, ಅವರ ಅಧೀನದಲ್ಲಿದ್ದ ದೇಶಗಳ ಮೇಲೆ ತನ್ನ ಆಳ್ವಿಕೆಯನ್ನು ವಿಸ್ತಾರಗೊಳಿಸಿದನು.

ಹೆರಡೋಟಿಸ್‌ನ ಬರೆವಣಿಗೆಯಿಂದ ಸೈರಸನು ಮಾಡಿದ ಯುದ್ಧಗಳ ವಿವರಗಳು ತಿಳಿಯಬರುತ್ತವೆ. ಸೈರಸನ ಮಗನಾದ ಕ್ಯಾಂಬಿಸಸನು ಇಜಿಪ್ತದ ಮೇಲೆ ಯುದ್ಧಮಾಡಿ ಜಯಿಸಿದನು. ಈತನು ಸೋತವರ ಮೇಲೆ ಕ್ರೌರ್ಯವನ್ನು ಪ್ರದರ್ಶಿಸಿ ಹಿಂಸಿಸಿದನೆಂದು ತಿಳಿದುಬಂದಿದೆ. ಈತನ ತರುವಾಯ ಹಿಸ್ಟಾಸ್ಪಸನ ಮಗನಾದ ಡೇರಿಯಸ್ಸನು ಕ್ರಿ. ಪೂ. ೫೨೧ರಿಂದ ೪೮೫ರ ವರೆಗೆ ಆಳಿದನು. ಈತನು ಬಹು ವಿಸ್ತಾರವಾದ ರಾಜ್ಯವನ್ನು ಸುವ್ಯವಸ್ಥಿತ ರೀತಿಯಿಂದ ಆಳಿದನಲ್ಲದೆ ಹೊಸದಾಗಿ ಕೆಲವು ಭಾಗಗಳನ್ನು ಕೂಡ ಗೆದ್ದನು. ಸಿಂಧೂ ನದಿಯ ತೀರ ಪ್ರದೇಶವೆಲ್ಲವೂ

ಈತನ ರಾಜ್ಯಕ್ಕೆ ಸೇರಿತ್ತೆಂದೂ ಮತ್ತು ವಿಶೇಷ ಕಪ್ಪವೂ ಸಲ್ಲುತ್ತಿತ್ತೆಂದೂ ತಿಳಿದು ಬಂದಿದೆ. ಡೇರಿಯುಸ್‌ನ ಆಡಳಿತ ಪದ್ಧತಿಯು ಶ್ಲಾಘ್ಯವಾಗಿತ್ತು. ಚಕ್ರಾಧಿಪತ್ಯವು ಭಾಗಗಳಾಗಿ ವಿಂಗಡಿಸಲ್ಪಟ್ಟು ಮುಖ್ಯನಾಯಕರ ಆಳಿ-ಕೆಗೆ ಒಳಪಟ್ಟಿತ್ತು. ಪ್ರಾಂತಗಳಲ್ಲಿ ಜನರಿಗೆ ಕಿರುಕುಳ ಉಂಟಾಗು ತ್ತಿತ್ತಂತೆ. ಪರ್ಶಿಯಾದಲ್ಲಿ ಸೈನ್ಯವ್ಯವಸ್ಥೆಯಿತ್ತು.

ಝೋರಾಸ್ಟರನು ಬೋಧಿಸಿದ ಮತವನ್ನೇ ಪರ್ಶಿಯನರು ಅವಲಂಬಿ ಸಿದ್ದರು. ಸೈನ್ಯದ ತರಗತಿಯವರ ಆಳಿಕೆಯು ಬಂದನಂತರ ಅವರ ಯಶಸ್ಸು ಕಡಿಮೆಯಾಯಿತು. ಆದಾಗ್ಯೂ ಪರ್ಶಿಯನರು ನಾಗರಿಕತೆ ಯಲ್ಲಿ ಅನೇಕ ಹಂತಗಳನ್ನು ಹತ್ತಿ ಕೀರ್ತಿಗಳಿಸಿದ್ದರು. ವಿಷ್ಣುಪುರಾಣ ದಲ್ಲಿ ಉಕ್ತವಾಗಿರುವ ಪರ್ಶಿಯಾ ದೇಶವು ಭರತಖಂಡದ ಒಂದು ಭಾಗವಾಗಿತ್ತು. ಮುದ್ರಾಮಂಜೂಷದಿಂದ ಈ ಅಭಿಪ್ರಾಯವು ದೃಢ ಪಡಿಸುತ್ತದೆ.

ನಾಗರಿಕತೆಯಲ್ಲಿ ಪಾರಸಿಕರಿಗೆ ಮಾನ್ಯಸ್ಥಾನವಿದೆ. ವಿಜ್ಞಾನ ಮತ್ತು ಸಾಹಿತ್ಯದಲ್ಲಿ ಚರಿತ್ರಾರ್ಹವಾದ ಜಾಣ್ಮೆಯ ಸಾಧನಗಳನ್ನು ನಡೆ ಸಿದ್ದಾರೆ. ಅಲ್ಲದೆ ವಾಸ್ತುಶಿಲ್ಪ ಮತ್ತು ಶಿಲ್ಪಕಲೆಯಲ್ಲಿಯೂ ಅವರು ಏಷ್ಯಾದ ಇನ್ನಿತರ ಜನಾಂಗಗಳಿಗೆ ಹಿಂದುಳಿದವರಲ್ಲವೆನ್ನಲು ಪೆರ್ಸಿಪೋಲಿಸ್ ನಲ್ಲಿರತಕ್ಕ ಅವರ ದೇವಸ್ಥಾನಗಳ, ಅರಮನೆಗಳ, ವಿಶ್ರಾಂತಿ ಗೃಹಗಳಲ್ಲಿ ಕೆತ್ತಿರುವ ಶಾಸನಗಳ ಆಧಾರಗಳೇ ಸಾಕು.

ರಾಜಕೀಯ ಪದ್ಧತಿಯಲ್ಲೂ ಪರ್ಶಿಯನರು ಮುಂದುವರಿದವರಾಗಿ ದ್ದರು. ಪರ್ಶಿಯಾದ ದೊರೆಯು ಸಮರ್ಥನಾದ ನಿರಂಂಕುಶ ಪ್ರಭು ವಾಗಿದ್ದನು. ದೇಶವೆಲ್ಲ ದೊರೆಯ ಸ್ವತ್ತಾಗಿ ಭಾವಿಸಲ್ಪಟ್ಟಿತ್ತು. ಪ್ರಜೆ ಗಳೆಲ್ಲರೂ ಆತನ ಅಧಿಕಾರಕ್ಕೆ ಒಳಪಟ್ಟಿದ್ದರು. ಹಿಂದೂ ಪದ್ಧತಿಯಂತೆ ಆತನನ್ನು ದೇವಾಂಶಸಂಭೂತನೆಂದು, ದೇವರ ಪ್ರತಿನಿಧಿಯೆಂದು ಭಾವಿಸಿ ಆತನಲ್ಲಿ ಪೂಜ್ಯಭಾವನೆಯನ್ನಿಡಲಾಗಿತ್ತು. ಆತನ ಆಸ್ಥಾನದಲ್ಲಿ ಉತ್ತಮ ಕುಲದ ಮೇಧಾವಿಗಳಿರುತ್ತಿದ್ದರು. ರಾಜನ ಅರಮನೆಯು ಸಕಲ ವೈಭವ ದಿಂದ ಕೂಡಿರುತ್ತಿತ್ತು. ಬ್ಯಾಬಿಲೋನಿಯವು ಚಳಿಗಾಲದ ವಾಸಕ್ಕೂ

ಸೂಸವು ವಸಂತಋತುವಿನ ಮತ್ತು ಎಕ್ಬಟಾನವು ಬೇಸಿಗೆಯ ರಾಜಧಾನಿಯಾಗಿದ್ದವು. ಈ ರೀತಿ ಬಹಳ ಹಿಂದಿನ ಕಾಲದಲ್ಲಿಯೇ ಪರ್ಶಿಯಾ (ಇರಾಣ) ದೇಶವು ನಾಗರಿಕತೆಯಲ್ಲಿ ಮುಂದುವರಿದಿದ್ದಿತು.



## ೯ ಅಸ್ಸೀರಿಯಾ ದೇಶ

ಅಸ್ಸೀರಿಯಾ ದೇಶವು ಟೈಗ್ರಿಸ್ ನದಿಯ ಪೂರ್ವಕ್ಕಿದ್ದಿತು; ಇರಾಣದ ಒಂದು ಭಾಗವಾಗಿ ಬ್ಯಾಬಿಲೋನಿಯಾ ಮೆಸೋಪೊಟಾಮಿಯಾ ದೇಶಗಳನ್ನೊಳಗೊಂಡಿತ್ತು. ಅಂದರೆ ಟೈಗ್ರಿಸ್ ಮತ್ತು ಯುಫ್ರೆಟಿಸ್ ನದಿಗಳ ಅಕ್ಕಪಕ್ಕದ ಪ್ರದೇಶಗಳನ್ನು ಒಳಗೊಂಡಿತ್ತು. ಉತ್ತರ ಭಾಗದಲ್ಲಿ ಮೇಲಿನವೆರಡು ನದಿಗಳ ಮಧ್ಯಭಾಗವಾಗಿದ್ದ ಮೆಸೋಪೊಟಾಮಿಯಾ ಪ್ರದೇಶವು ಮರುಭೂಮಿಯು. ಅದು ಸಂಚರಿಸುತ್ತಿದ್ದ ಪಂಗಡಗಳ ನಿವಾಸಸ್ಥಾನವಾಗಿತ್ತು. ಆದರೆ ದಕ್ಷಿಣ ಭಾಗದ ಬ್ಯಾಬಿಲೋನಿಯಾ ದೇಶವು ಫಲವತ್ತಾದ ಬಯಲುಭೂಮಿಯಾಗಿ ಅನೇಕ ನೀರಾವರಿ ನಾಲೆಗಳಿಂದ ಕೂಡಿ ವ್ಯವಸಾಯಕ್ಕೆ ಅತ್ಯಂತ ಅನುಕೂಲವಾಗಿದ್ದಿತು. ಹೆರಡೋಟಸನು ವರ್ಣಿಸಿರತಕ್ಕ ದೇಶಗಳಲ್ಲೆಲ್ಲ ಈ ದೇಶಕ್ಕೆ ಹೆಚ್ಚಿನ ಸ್ಥಾನ ದೊರೆತಿದೆ. ಇಂದು ಆಗಿನ ನೀರಾವರಿ ಸೌಕರ್ಯಗಳಿಲ್ಲದೆ ಅದು ಮರುಭೂಮಿಯಾಗಿದೆ. ಇಲ್ಲಿ ದೊರೆತಿರತಕ್ಕ ಪುರಾತನ ಅವಶೇಷಗಳು ಬಹಳ ರಮ್ಯವಾದ ಪಟ್ಟಣಗಳು ಕಟ್ಟಿದ್ದ ಸ್ಥಳಗಳು, ಗಡಿಯ ಪ್ರಾಕಾರಗಳು, ನೀರಾವರಿ ನಾಲೆಗಳು ಆ ಕಾಲದ ವೈಭವವನ್ನು ಸೂಚಿಸುತ್ತವೆ. ಈಗಲೂ ಶೋಧನೆಗಳಿಂದ ಅನೇಕ ಸಂಗತಿಗಳು ಗೊತ್ತಾಗುತ್ತವೆ.

ಒಂದು ಕಾಲದಲ್ಲಿ ಅಸ್ಸೀರಿಯಾ ಸಾಮ್ರಾಜ್ಯವು ಪ್ರಪಂಚದಲ್ಲಿ ಅತಿ ಪ್ರಬಲವಾಗಿದ್ದಿತು. ಆದರೆ ಅಸ್ಸೀರಿಯಾ ಮತ್ತು ಬ್ಯಾಬಿಲೋನಿಯಾ

ದೇಶಗಳ ಚರಿತ್ರೆಯ ವಿಷಯವಾಗಿ ಗ್ರೀಕ ಮತ್ತು ಕ್ರೈಸ್ತಮತ ಗ್ರಂಥಗಳಿಂದ ದೊರೆತ ಕೆಲವು ಆಧಾರಗಳು ಏಕಪ್ರಕಾರವಾಗಿರದೆ ಭಿನ್ನಾಭಿಪ್ರಾಯಕ್ಕೆ ಆಸ್ಪದ ಕೊಡುತ್ತವೆ.

ಕ್ರಿ. ಪೂ. ೧೪೦೦ರಲ್ಲಿ ಅಸ್ಸೀರಿಯಾ ದೇಶದ ಪ್ರಗತಿಗೆ ಪ್ರಾರಂಭವಾಯಿತು. ಅದೇ ಕಾಲದಲ್ಲಿ ಟ್ರಾಯ ನಗರವು ನಾಶವಾಯಿತು. ಮತ್ತು ಇಜಿಪ್ತವು ಕ್ಷೀಣದೆಶೆಗೆ ಬಂದಿತು. ಇತರ ಸಾಮ್ರಾಜ್ಯಗಳ ಅವನತಿಯೂ ಆಯಿತು. ಯಹೂದಿಯರ ಅವನತಿಯೂ ಇದೇ ಕಾಲದಲ್ಲಿಯೇ ಆಯಿತು.

ಅಸ್ಸೀರಿಯಾ ಸಾಮ್ರಾಜ್ಯವನ್ನಾಳಿದ ದೊರೆಗಳಲ್ಲಿ ನಾಲ್ವರು ಸಾಮ್ರಾಟರು ಕೀರ್ತಿವಂತರು: ೨ನೆಯ ಸಾರ್ಗನ್, ಸೆನಾಚೆರಿಬ್, ಅಸ್ಸಾರಹಡ್ಡನ್, ಮತ್ತು ಅಸುರ್ಬನ್‌ಪಾಲ್ ಎಂಬವರು. ಇವರಲ್ಲಿ ಸಾರ್ಗನ್ ಚಕ್ರವರ್ತಿಯೇ ಅಸ್ಸೀರಿಯಾ ಸಾಮ್ರಾಜ್ಯ ಸ್ಥಾಪಕನೆಂದು ತಿಳಿದು ಬಂದಿದೆ. ಪುರಾಣೇತಿಹಾಸಗಳನ್ನು ನಂಬುವದಾದರೆ ನೈನಸ್ ಎಂಬಾತನು ಈ ಸಾಮ್ರಾಜ್ಯ ಸ್ಥಾಪಕನು. ಆದರೆ ಪುರಾತನ ರೋಮು ನಗರವನ್ನು ರಾಮುಲಸ್‌ನು ಕಟ್ಟಿದಂತೆಯೇ ನೈನಸ್ ಎಂಬಾತನು ಅಸ್ಸೀ-ರಿಯಾವನ್ನು ಕಟ್ಟಿದುದು. ಪ್ರಾಯಶಃ ಈತನ ಹಿಂದೆ ಆಳಿದ ದೊರೆಯು ಹಮ್ಮುರಾಬಿಯು ತರುವಾಯ ಆಳಿದವನಾಗಿರಬೇಕು.

ಅಸ್ಸೀರಿಯಾವು ಉನ್ನತಸ್ಥಿತಿಗೆ ಬಂದಾಗ, ಸಮಕಾಲೀನವಾಗಿ ಈಜಿಪ್ತ ಬ್ಯಾಬಿಲೋನಿಯಾಗಳು ಇದ್ದವು. ತನ್ನ ಸಾಮ್ರಾಜ್ಯತ್ವವನ್ನು ಉಳಿಸಿಕೊಳ್ಳಲು ಈ ದೇಶವು ಈಜಿಪ್ತ ಬ್ಯಾಬಿಲೊನಿಯಾಗಳೊಡನೆ ಹೋರಾಡಬೇಕಾದ ಪರಿಸ್ಥಿತಿ ಒದಗಿತ್ತು. ಸಾರ್ಗನನ ತರುವಾಯ ದೊರೆತನಕ್ಕೆ ಬಂದ ಸೇನಾಚರಿಬ್ಬನು ರಕ್ಷಣೆಗಾಗಿ ಪಕ್ಕದ ದೇಶಗಳೊಡನೆ ಹೋರಾಟ ನಡೆಸಬೇಕಾಗಿದ್ದಿತು. ಅವನು ಯಹೂದಿಯರನ್ನು ಬೆದರಿಸಿ ಈಜಿಪ್ತ ದೇಶವನ್ನು ಮುತ್ತಿದನು. ಯಹೂದಿಯರು ತಮ್ಮ ಪವಿತ್ರಸ್ಥಾನವಾದ ಜೆರುಸಲೇಂವನ್ನು ರಕ್ಷಿಸಿಕೊಂಡರಾದರೂ ಕಡೆಗೆ ಶರಣಾಗತರಾದರು. ಇದರಂತೆ ಬಾಬಿಲೋನಿಯಾವನ್ನೂ ಮುತ್ತಿದನು.

ಆದರೆ ಆತನು ಇವುಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಲಿಲ್ಲ. ಈತನ ತರುವಾಯ ರಾಜ್ಯಕ್ಕೆ ಬಂದ ಅಸ್ಸಾರ್ ಹಡ್ಡನ್‌ನ (ಕ್ರಿ. ಪೂ. ೬೮೧–೬೬೯) ಕಾಲದಲ್ಲಿ ಆಡಳಿತೆಯ ನೀತಿಯು ಬದಲಾಯಿತು. ಈ ದೊರೆಯು ಈಜಿಪ್ತನ್ನು ಗೆದ್ದು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಕೆಲವು ಕಾಲಾನಂತರ ರೋಮ ಚಕ್ರಾಧಿಪತ್ಯವು ಗಳಿಸಿದ ಖ್ಯಾತಿಯನ್ನು ಅಸ್ಸೀರಿಯಾವು ಪಡೆಯಿತು. ಕೇಂದ್ರದಲ್ಲಿ ಪ್ರಬಲವಾದ ಸರಕಾರವು ಸ್ಥಾಪಿಸಲ್ಪಟ್ಟಿತು.

ಆಸುರ್ಬನಪಾಲ ದೊರೆಯು ತರುವಾಯ ಆಳಿದ ಅರಸನು ಕ್ರಿ. ಪೂ. ೬೬೮—೬೨೬ರ ವರೆಗೆ ಆಳಿದನು. ಈತನ ರಾಜಧಾನಿಯು ನಿನೇವೆ ನಗರವಾಗಿದ್ದಿತು. ಸೇನಾಚೆರಿಬ್ ದೊರೆಯು ಈ ನಗರದ ನಿರ್ಮಾಪಕನೆಂದು ತಿಳಿದುಬಂದಿದೆ. ಸಾರ್ಡನಪಾಲಿಸನೇ ಕಡೆಯ ರಾಜನು. ಈತನ ಕಾಲದಲ್ಲಿ ಮಿಡಿಯಾ ದೇಶದ ರಾಜನಾದ ಸೈಯಾಕ್ಸೆರಿಸ್‌ನೂ ಬ್ಯಾಬಿಲೋನಿಯಾ ರಾಜನಾದ ನಬೊಪೊಲಾಸ್ಸಾರ್‌ನೂ ಒಗ್ಗಟ್ಟಿನಿಂದ ನಿನೇವೆ ನಗರವನ್ನು ನಾಶಗೊಳಿಸಿದರು. ಇದರ ಪತನದಿಂದ ಅಸ್ಸೀರಿಯಾ ಸಾಮ್ರಾಜ್ಯವು ಕೊನೆಗಂಡಿತು.

ನಿನೇವೆ ನಗರವು ಪುರಾತನ ಕಾಲದಲ್ಲಿ ಬಹಳ ಮಟ್ಟಿಗೆ ಲೋಕವಿಖ್ಯಾತವಾದ ನಗರವಾಗಿದ್ದಿತೆಂದು ತಿಳಿಯಬಂದಿರುತ್ತದೆ. ಈ ನಗರವನ್ನು ಕಟ್ಟಿದ್ದ ಪ್ರದೇಶವನ್ನು ಪರೀಕ್ಷಿಸಿದ ಸುಪ್ರಸಿದ್ಧ ಚರಿತ್ರಕಾರರೂ ಮತ್ತು ಭೂಸಂಶೋಧಕರೂ ನಿನೇವೆ ನಗರವು ಅಸ್ಸೀರಿಯಾ ಚಕ್ರಾಧಿಪತ್ಯದ ಸಕಲ ಅಭಿವೃದ್ಧಿಗೂ ಕೇಂದ್ರ ಸ್ಥಾನವಾಗಿದ್ದಿತೆಂದು ಅಭಿಪ್ರಾಯಪಟ್ಟಿರುತ್ತಾರೆ. ಟೈಗ್ರಿಸ್ ನದಿಯ ಪೂರ್ವ ದಂಡೆಯ ಮೇಲೆ ಕಟ್ಟಲ್ಪಟ್ಟಿದ್ದ ಈ ನಗರದ ವಿಸ್ತೀರ್ಣವು ಆಧುನಿಕ ಲಂಡನ್ನ ನಗರದ ಎರಡಷ್ಟಿತೆಂದು ನಂಬಲಾಗಿದೆ. ಇದು ಉತ್ಪ್ರೇಕ್ಷೆಯೊಂದರೂ ಪ್ರಾಚೀನ ಕಾಲದ ಏಷ್ಯಾ ನಗರಗಳಲ್ಲೆಲ್ಲ ನಿನೇವೆಯು ಬಹಳ ಹೆಸರುವಾಸಿಯಾಗಿದ್ದಿತೆಂದು ನಿಸ್ಸಂದೇಹವಾಗಿ ಹೇಳಬಹುದು.

ಇಲ್ಲಿಯ ಜನರು ವಿಶೇಷವಾಗಿ ವ್ಯಾಪಾರ ಮಾಡಿದುದರಿಂದ ಬಹಳ ಐಶ್ವರ್ಯವನ್ನು ಗಳಿಸಿದ್ದರು. ಭೂಗತವಾಗಿದ್ದ ಈ ನಗರದ ಅಸ್ತಿತ್ವವು ಬಹಳ ಕಾಲದ ವರೆಗೆ ಬೆಳಕಿಗೆ ಬಂದಿರಲಿಲ್ಲ. ಇಲ್ಲಿಯ ಅವಶೇಷಗಳ ಸ್ವರೂಪವು ತಿಳಿದಿರಲಿಲ್ಲ. ಕಳೆದ ೧೯ನೆಯ ಶತಮಾನದ ಅಂತ್ಯದಲ್ಲಿ ಮೊಸಲ್ ಪಟ್ಟಣದಲ್ಲಿದ್ದ ಫ್ರೆಂಚ ಅಧಿಕಾರಸ್ಥನಾದ ಬೊಟ್ಟ ಎಂಬಾತನೂ ಲೈಯಾರ್ಡ ಎಂಬವರೂ ಟೈಗ್ರಿಸ ನದಿಯ ಉತ್ತರ ಭಾಗದ ಹತ್ತರ ಈಗಿನ ಮೊಸಲ್ ಎಂಬಲ್ಲಿ (ಮೆಸೊಪೊಟಾಮಿಯಾದ ಉತ್ತರದಲ್ಲಿ) ನಡೆಸಿದ ಭೂಶೋಧನೆಗಳ ಪರಿಣಾಮವಾಗಿ ಇವುಗಳ ಗತವೈಭವದ ಕುರುಹಗಳು ಅಸಂಖ್ಯಾಕವಾಗಿ ದೊರೆತಿವೆ. ಗೋಡೆಗಳು, ಅರಮನೆಗಳು ಮತ್ತು ಕಟ್ಟಡಗಳು, ಹೇರಳವಾದ ಕೆತ್ತಿಗೆಯ ಕೆಲಸಗಳು ಅವರ ಜೀವನದ ವ್ಯವಸ್ಥೆಯನ್ನು ತಿಳಿಸುತ್ತವೆ. ಇಷ್ಟು ಖ್ಯಾತಿಯನ್ನು ಗಳಿಸಿದ ಅಸ್ಸೀರಿಯಾ ಸಾಮ್ರಾಜ್ಯದ ಅವನತಿಯು ಅವರು ಅಕ್ಕಪಕ್ಕದ ದೇಶಗಳ ಮೇಲೆ ಪದೇ ಪದೇ ಯುದ್ಧಮಾಡುತ್ತಿದ್ದದರಿಂದ—ಉಂಟಾಯಿತೆಂದು ತಿಳಿಯಲಾಗಿದೆ. ನಿನೇವೆಯಲ್ಲಿ ದೊರೆತ ಕೆಲವು ಕಲಾವಸ್ತುಗಳನ್ನು ಬ್ರಿಟಿಷ್ ಮ್ಯುಝಿಯಮಿನಲ್ಲಿಟ್ಟಿರುತ್ತಾರೆ. ಅವು ಅವರ ನಾಗರಿಕತೆಯ ಮಟ್ಟವನ್ನೇ ನಿರ್ಧರಿಸಲು ಸಹಕಾರಿಯಾಗಿವೆ. ಅಲ್ಲಿಯ ಅವಶೇಷಗಳು ಕ್ರಿ. ಪೂ. ೮ನೆಯ ಶತಮಾನದಷ್ಟು ಹಳೆಯವೆಂದೂ ಮತ್ತು ಏಷ್ಯಾದಲ್ಲಿ ದೊರೆತಿರತಕ್ಕ ಎಲ್ಲ ಕಲಾವಸ್ತುಗಳಿಗಿಂತಲೂ ಶ್ರೇಷ್ಠತರಗತಿಗೆ ಸೇರಿದವಾಗಿವೆಯೆಂದೂ ಕೆಲವು ಚರಿತ್ರಕಾರರು ಅಭಿಪ್ರಾಯ ಪಟ್ಟಿರುತ್ತಾರೆ. (ಡಾ. ಲೆನಾರ್ಡ ಪುಟ ೭೬) ಅವರ ಕಟ್ಟಡಗಳ ಮೇಲೆ ಕೆತ್ತಿರತಕ್ಕ ಶಾಸನಗಳು ಗೂಢ ಲಿಪಿಯಲ್ಲಿ ಬರೆಯಲ್ಪಟ್ಟಿವೆ. ಇವುಗಳ ಅರ್ಥವು ಸಂಪೂರ್ಣವಾಗಿ ತಿಳಿದನಂತರ ಈ ದೇಶದ ನಾಗರಿಕತೆಯು ಇನ್ನೂ ಸಂಪೂರ್ಣವಾಗಿ ಗೊತ್ತಾಗುವಲ್ಲಿ ಸಂಶಯವಿಲ್ಲ.

ಅಸ್ಸೀರಿಯಾ ದೇಶದ ಜನರಮತದ ಪದ್ಧತಿಯಲ್ಲಿ ಬ್ಯಾಬಿಲೋನಿಯಾ ದೇಶದ ಜನರ ಮತದ ಪದ್ಧತಿಯಂತೆ ವಿಗ್ರಹಾರಾಧನೆಯು ರೂಢಿಯಲ್ಲಿ

ಇದ್ದಿತು. ಬಾಬಿಲೋನಿಯಾ ದೇಶದ ಸಂಸ್ಕೃತಿಗೂ ನಿನೇವೆಯಲ್ಲಿ ಅಭಿವೃದ್ಧಿಗೊಂಡ ಸಂಸ್ಕೃತಿಗೂ ನಿಕಟ ಸಂಬಂಧವಿದೆ. ಯಾಕಂದರೆ ಬ್ಯಾಬಿಲೋನಿಯಾದಲ್ಲಿ ರೂಢಿಯಲ್ಲಿದ್ದ ಬರೆವಣಿಗೆ, ಕಲೆ, ಜಾತಿಯ ಪದ್ಧತಿ, ಕಾನೂನು ಇಲ್ಲಿಯ ಮಾದರಿಯನ್ನು ಹೋಲುತ್ತವೆ. ಪ್ರಾಯಶಃ ಬ್ಯಾಬಿಲೋನಿಯಾ ದೇಶದ ನಾಗರಿಕತೆಯನ್ನು ಅಸ್ಸೀರಿಯಾ ದೇಶದ ಜನರು ಅನುಸರಿಸಿರಬೇಕು. ಅಸ್ಸೀರಿಯನರು ಪದೇಪದೇ ಯುದ್ಧದಲ್ಲಿ ತೊಡಗಿದ್ದರೆಂದು ಮೇಲೆ ತಿಳಿಸಿದೆಯಷ್ಟೇ. ಆದಕಾರಣ ಅವರಿಗೆ ಯುದ್ಧದ ಕ್ರಮದಲ್ಲಿ ವಿಶೇಷ ಪರಿಶ್ರಮವಿದ್ದಿತು; ಆಸಕ್ತಿಯಿತ್ತು. ಅವರು ಯುದ್ಧವಿದ್ಯೆಯಲ್ಲಿ ಕೆಲವು ವಿಧಾನಗಳನ್ನು ಕಂಡು ಹಿಡಿದರು. ತಮ್ಮವೇ ಆದ ಕೆಲವು ರೀತಿಗಳನ್ನು ಅವರು ಅನುಸರಿಸುತ್ತಿದ್ದರು. ಹೀಗಿದ್ದರೂ ಅವರ ಅವನತಿಗೆ ಮಿತಿಮೀರಿದ ಯುದ್ಧಗಳೇ ಕಾರಣವಾಗಿ ಇರಲಾರವೇನು ?

---

## ೧೦ ಬ್ಯಾಬಿಲೋನಿಯಾ

ಈ ದೇಶದ ನಾಗರಿಕತೆಯೂ ಅಸ್ಸೀರಿಯಾದಷ್ಟೇ ಪುರಾತನವಾದುದು. ಇವೆರಡರ ಚರಿತ್ರೆಯಲ್ಲಿ ನಿಕಟ ಸಂಬಂಧವಿರುವದಾಗಿ ಕಾಣಬರುತ್ತದೆ. ಈ ದೇಶದ ಚರಿತ್ರೆಯನ್ನು ತಿಳಿಯಲು ಗ್ರೀಕ ಚರಿತ್ರೆಕಾರರ ಬರೆವಣಿಗೆಗಳೇ ಮುಖ್ಯ ಸಹಕಾರಿಗಳಾಗಿವೆ. ಅವುಗಳ ರೀತ್ಯಾ ಈ ದೇಶದ ವೈಭವ ಮತ್ತು ಶ್ರೇಷ್ಠತೆಗಳು ಅಸ್ಸೀರಿಯಾ ದೇಶದವುಗಳಿಗಿಂತ ಪುರಾತನವಾದವೆಂದು ನಿರ್ಧರಿಸಬಹುದು. ಬ್ಯಾಬಿಲೋನಿಯವು ಪ್ರಾಚೀನ ಕಾಲದಲ್ಲಿ ಅತ್ಯಂತ ದೊಡ್ಡದೂ ಪುರಾತನವೂ ಆದ ನಗರಗಳಲ್ಲೊಂದಾಗಿದ್ದಿತು. ಕೆಲವು ಕಾಲ ಅಂದರೆ ಸುಮಾರು ಐನೂರು ವರ್ಷಗಳ ವರೆಗೆ ಅದು

ಅಸ್ಸೀರಿಯಾ ಸಾಮ್ರಾಜ್ಯಕ್ಕೆ ಅಧೀನವಾಗಿ, ನಂತರ ತನ್ನ ಸ್ವಾತಂತ್ರ್ಯವನ್ನು ಗಳಿಸಿಕೊಂಡಿತು. ಆದರೆ ಪುನಃ ಅಸ್ಸೀರಿಯಾಕ್ಕೆ ಅಧೀನವಾಗಿ ಕ್ರಿ. ಪೂ. ೬೦೫ರಲ್ಲಿ ಅಸ್ಸೀರಿಯಾ ಸಾಮ್ರಾಜ್ಯವು ಅಳಿದ ನಂತರ ಸ್ವತಂತ್ರವಾಯಿತು. ಆ ತರುವಾಯ ಕೆಲವು ರಾಜರು ಬ್ಯಾಬಿಲೋನಿಯಾ ದೇಶವನ್ನು ಆಳಿ, ಆ ದೇಶದ ನಾಗರಿಕತೆಯ ಉನ್ನತಿಯನ್ನೇ ಹೆಚ್ಚಿಸಿದರು.

ಕ್ರೈಸ್ತಮತ ಗ್ರಂಥಗಳ ಪ್ರಕಾರ ನಾಬೋಪೋಲ್ಸಾರ ದೊರೆಯ ಮಗನಾದ ನೆಬುಚೆಡ್ನೆಸಾರನ ಆಳಿಕೆಯಲ್ಲಿ (ಕ್ರಿ. ಪೂ. ೬೦೪—೫೬೧) ಬ್ಯಾಬಿಲೋನಿಯಾವು ಅತ್ಯುನ್ನತ ಸ್ಥಾನವನ್ನು ಗಳಿಸಿತು. ಪ್ರಬಲ ರಾಷ್ಟ್ರವಾಗಿದ್ದ ಕಾರಣ ಈಜಿಪ್ತದ ರಾಜನು ಸೋಲಿಸಲ್ಪಟ್ಟನು. ಜೂಡಾ (ಯೆಹೂದಿಯರ) ದೇಶವೂ ಆಕ್ರಮಿಸಲ್ಪಟ್ಟು, ಅಲ್ಲಿಯ ಜನರು ಸೆರೆ ಹಿಡಿಯಲ್ಪಟ್ಟರು. ಅವರಿಗೆ ವಿಶೇಷ ಕಿರುಕುಳ ಕೊಡಲ್ಪಟ್ಟಿತು. ಅವರ ಪವಿತ್ರ ಭೂಮಿಯಾದ ಜೆರೂಸಲೇಮವು ನಿರ್ಜನವಾಯಿತು. ನಂತರ ಫಿನಿಷಿಯಾ ದೇಶವು ಸೋಲಿಸಲ್ಪಟ್ಟಿತು. ಮತ್ತು ಈಜಿಪ್ತದಲ್ಲಿ ನೈಲ ನದಿಯ ಕೆಳಭಾಗವು ಕೊಳ್ಳೆಹೊಡೆಯಲ್ಪಟ್ಟಿತು. ಈತನ ತರುವಾಯ ಬಂದವರು ಆಕ್ರಮಣ ನೀತಿಯನ್ನು ಮುಂದುವರಿಸುವಷ್ಟು ಸಮರ್ಥರಾಗಿರದ್ದರಿಂದ ಅವರು ರಕ್ಷಣೆಯ ಮಾರ್ಗವನ್ನೇ ಅವಲಂಬಿಸಬೇಕಾಯಿತು. ಅನೇಕ ನಾಲೆಗಳು ಸೇತುವೆಗಳು, ಸರೋವರಗಳು, ಇವುಗಳ ನಿರ್ಮಾಣದಿಂದ ರಾಜಧಾನಿಯ ಪ್ರವೇಶವು ದುರ್ಗಮವಾಗಿತ್ತು. ಈ ಕಾಲದಲ್ಲಿಯೇ ಮಿಡಿಯಾ ದೇಶವು ಪ್ರಬಲ ಸ್ಥಿತಿಗೆ ಬಂದಿತು. ಅವರ ದೊರೆಯಾದ ಸೈರಸನು ಕ್ರಿ. ಪೂ. ೫೩೮ರಲ್ಲಿ ಬ್ಯಾಬಿಲೋನಿಯವನ್ನು ಜಯಿಸಿಕೊಂಡನು. ಇಷ್ಟು ಸಂಕ್ಷಿಪ್ತ ಕಾಲದಲ್ಲಿಯೇ ಈ ದೇಶದ ಚರಿತ್ರೆಯು ಕೊನೆಗಂಡಿತು. ಆದರೆ ಅದರ ನಾಗರಿಕತೆಯ ಕೀರ್ತಿಯು ಹಿರಿದಾಗಿಯೇ ಉಳಿಯಿತು.

ಗ್ರೀಕ ಚರಿತ್ರಕಾರನಾದ ಹೆರೊಡೊಟಸನ ವರ್ಣನೆಯಿಂದ ಬ್ಯಾಬಿಲೋನಿಯಾವು ನಿನೇವೆಯಷ್ಟೇ ಮುಖ್ಯವಾದುದು. ಈ ನಗರವು ಸ್ವರ್ಗೀಯ ವೈಭವದಿಂದ ಶೋಭಿಸುತ್ತಿತ್ತೆಂದು ತಿಳಿಯಬರುತ್ತದೆ. ಯುಫ್ರೆಟೀಸ ನದಿಯ ಉಭಯ ಪಾರ್ಶ್ವದಲ್ಲೂ ಚಚ್ಚೌಕಾದ ಮತ್ತು

ನೇರವಾದ ಬೀದಿಗಳಿಂದ ಕೂಡಿ, ಕಟ್ಟಡಗಳು ಕಟ್ಟಲ್ಪಟ್ಟಿದ್ದ ಈ ನಗರದ ವಿಸ್ತೀರ್ಣವು ೬೦ ಮೈಲು ಆಗಿದ್ದಿತು. ಗೋಡೆಗಳಿಂದ ಆವೃತವಾದ ಈ ನಗರದ ಆಯುಕಟ್ಟಿನೊಳಗೆ ಅನೇಕ ದೊಡ್ಡ ಅಗ್ರಹಾರಗಳೂ ತೋಟಗಳೂ ವ್ಯವಸಾಯು ಕ್ಷೇತ್ರಗಳೂ ನಿರ್ಮಿಸಲ್ಪಟ್ಟಂತೆ ತಿಳಿದು ಬರುತ್ತದೆ. ಪುರಾತನ ಕಾಲದಲ್ಲಿ ಎಲ್ಲ ಚರಿತ್ರಕಾರರಿಗೂ ಆಶ್ಚರ್ಯವನ್ನುಂಟುಮಾಡಿದ ಮತ್ತು ಅತ್ಯಂತ ವೈಭವದಿಂದ ಶೋಭಿಸುತ್ತಿದ್ದ ಈ ನಗರವು ನಾಬೊಪೋಲಾಸ್ಸಾರ್ ಕಾಲದಲ್ಲಿ ನಿನೇವೆಯಷ್ಟೇ ಶ್ರೇಷ್ಠತೆಯನ್ನು ಪಡೆದಿರಬೇಕೆಂದು ನಂಬಲಾಗಿದೆ. ಬ್ಯಾಬಿಲೋನಿಯವು ೨೦೦ ಅಡಿಗಳಷ್ಟು ಎತ್ತರ, ೫೦ ಅಡಿಗಳಷ್ಟು ದಪ್ಪವಾದ ಸುಟ್ಟ ಇಟ್ಟಿಗೆಗಳಿಂದ ಕಟ್ಟಲಾದ ಗೋಡೆಯಿಂದ ಆವೃತವಾಗಿದ್ದಿತು. ರಾಜನ ಅರಮನೆಯು ನದಿಯ ಎರಡೂ ದಂಡೆಗಳ ಮೇಲೆಯೂ ಇದ್ದಿತು. ಇದರ ಸಮೀಪದಲ್ಲಿ ಲೋಕರಂಜಕವಾದ ಉದ್ಯಾನಗಳು ನಿರ್ಮಿಲ್ಪಟ್ಟಿದ್ದವು. ಇವುಗಳನ್ನು ನಿರ್ಮಿಸಿದಾತನು ನೆಬುಚೆಡ್ನೆಸಾರನು. ಇದಕ್ಕಿಂತ ಅದ್ಭುತವಾಗಿ ಬಾಲ್ ಅಥವಾ ಬೆಲಸ್ಸಿನಲ್ಲಿ ಸುಮಾರು ೩೦೦ ಅಡಿ ಎತ್ತರವುಳ್ಳ ಚಚ್ಚೌಕಾದ ದೇವಾಲಯುವು ನಿರ್ಮಿಸಲ್ಪಟ್ಟಿತ್ತು. ಅದಕ್ಕೆ ೮ ಅಂತಸ್ತುಗಳಿದ್ದವು. ಅದರ ಮೇಲ್ಭಾಗವು ಪಿರಮಿಡ್‌ವನ್ನು ಹೋಲುವಂತಿತ್ತು. ಬ್ಯಾಬಿಲೋನಿಯುವು ತನ್ನ ಕೈಗಾರಿಕೆ ಮತ್ತು ಜನಸಂಖ್ಯೆ ಕ್ಷೀಣವಾದುದರಿಂದ ಹಾಳಾಯಿತೇ ಹೊರತು ಪರಕೀಯುರ ಆಕ್ರಮಣದಿಂದಲ್ಲ. ಇಂದು ಅದರ ಅಸಮಾನವಾದ ವೈಭವವು ಭೂಗತವಾಗಿದೆ. ಆ ಸ್ಥಳದಲ್ಲಿ ಗತವೈಭವದ ಕುರುಹುಗಳು ದೊರೆತಿವೆ. ಚರಿತ್ರೆಕಾರರ ವರ್ಣನೆಗಳು ಅಚ್ಚಳಿಯದಂತಿವೆ.

ಬ್ಯಾಬಿಲೋನಿಯಾ ದೇಶದ ಜನರ ಭಾಷೆಯು ಹಮ್ಮುರಾಬಿಯ ಅಂದರೆ ಸೆಮಿಟಿಕ್ ಜನಾಂಗದ ಒಂದು ಭಾಷೆಯಾಗಿದ್ದಿತು. ಅವರಿಗೆ ಕಾಲ್ಡೀಯನರೆಂದೂ ಹೆಸರು. ಅವರಲ್ಲಿ ಭಾರತ ದೇಶದ ಬ್ರಾಹ್ಮಣರಂತೆ ಪ್ರಬಲವಾದ ಜಾತಿಪದ್ಧತಿಯಿದ್ದಿತು. ಬ್ಯಾಬಿಲೋನಿಯುವು ಬಹಳ

ಮಟ್ಟಿಗೆ ದರ್ಪದ ಆಡಳಿತದಿಂದಲೂ ಐಶ್ವರ್ಯದಿಂದಲೂ ನಷ್ಟವಾಯಿ ತೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಮತ್ತೆ ಕೆಲವರು ಅನೀತಿ ಯುತವಾದದ್ದರಿಂದ ಹಾಳಾಯಿತೆಂದು ಅಭಿಪ್ರಾಯಪಡುತ್ತಾರೆ.

ವ್ಯಾಪಾರದಿಂದಲೂ ವ್ಯವಸಾಯದಿಂದಲೂ ಬ್ಯಾಬಿಲೋನಿಯವು ಬಹಳ ಐಶ್ವರ್ಯವನ್ನು ಗಳಿಸಿತು. ಪರ್ಶಿಯದ ಒಂದು ಪ್ರಾಂತವಾದರೂ ಮೂರನೆಯ ಒಂದು ಭಾಗದಷ್ಟು ವರಮಾನವು ಬ್ಯಾಬಿಲೋನಿಯಾ ದಿಂದಲೇ ಸಲ್ಲುತ್ತಿತ್ತು. ಭೂ ಮತ್ತು ಜಲ ಸೌಕರ್ಯಗಳು ಪರ್ಶಿಯಾ ಕೊಲ್ಲಿಗೂ ಮೆಡಿಟರೇನಿಯನ್ ಸಮುದ್ರಕ್ಕೂ ಇದ್ದವು. ಭಾರತ ದೊಡನೆ ಪಶ್ಚಿಮ ದೇಶಗಳು ನಡೆಸುತ್ತಿದ್ದ ಅಮೂಲ್ಯ ವ್ಯಾಪಾರವು ಸಮುದ್ರದಿಂದ ಯುಫ್ರೇಟಿಸ್ ನದಿಯ ಮೂಲಕ ಬ್ಯಾಬಿಲೋನಿಯಾ ಮಾರ್ಗವಾಗಿ ಸಾಗುತ್ತಿತ್ತು. ಇದಲ್ಲದೆ ಬ್ಯಾಬಿಲೋನಿಯಾದಲ್ಲಿ ಹತ್ತಿಯ ಮತ್ತು ರೇಶಿಮೆಯ ಬಟ್ಟೆಗಳೂ ಬೆಲೆಯುಳ್ಳ ಹಸನಾದ ಜಮಖಾನೆಗಳೂ ಸಿದ್ಧವಾಗುತ್ತಿದ್ದವು. ಈ ಸರಕುಗಳು ದೂರದ ಪಶ್ಚಿಮದ ರೋಮನ್ನರ ಮೆಚ್ಚುಗೆಗೆ ಪಾತ್ರವಾಗಿದ್ದವು. ಬ್ಯಾಬಿಲೋನಿಯರು ಜ್ಯೋತಿಷ್ಯ ಶಾಸ್ತ್ರ ದಲ್ಲೂ ಪ್ರವೀಣರಾಗಿದ್ದರು. ಇದು ಅವರಿಗೆ ವಂಶಪರಂಪರವಾಗಿ ಬಂದ ವಿದ್ಯೆಯಾಗಿತ್ತಾದ ಕಾರಣ ಅವರಿಗೆ ಈ ಭಾಗದಲ್ಲಿ ವಿಶೇಷ ಗೌರವವಿತ್ತು. ರೋಮನರು ಮತ್ತು ಗ್ರೀಕರು ಕೂಡ ಇದನ್ನು ಕಾಲ್ಡೀಯನರ ವಿದ್ಯೆ ಯೆಂದು ತಿಳಿದಿದ್ದರು. ದಕ್ಷಿಣ ಯುರೋಪಿನಲ್ಲಿ ಈ ವಿದ್ಯೆಯಲ್ಲಿ ಪ್ರವೀಣ ರಾದವರನ್ನು ಕಾಲ್ಡೀಯನರೆಂದು ಕರೆಯುತ್ತಿದ್ದರು. ಗ್ರಹಗಳಲ್ಲಿ ಮುಖ್ಯ ವಾದ ಸೂರ್ಯ ಚಂದ್ರರನ್ನು ಅವರು ಮುಖ್ಯದೇವರೆಂದು ಭಾವಿಸಿದ್ದರು. ಆದ ಕಾರಣ ಅವರು ಬಾಲ್‌ಜೆಲಸ್ ಎಂದು ಸೂರ್ಯದೇವನನ್ನು ಮನುಷ್ಯಾಕೃತಿಯಲ್ಲಿ ನಿರ್ಮಿಸಿ ಆರಾಧಿಸುತ್ತಿದ್ದರು. ಗ್ರೀಕರು ಮತ್ತು ರೋಮನರು ಜ್ಯೂಸ್ ಮತ್ತು ಜೂಪಿಟರ್ ಅಥವಾ ಸೆಟರ್ನ್‌ನೊಂದಿಗೆ ಈ ದೇವನನ್ನು ಹೋಲಿಸುತ್ತಿದ್ದರು. ಬಾಬಿಲೋನಿಯರು ಬೆಲಸ್‌ನನ್ನು ಬ್ಯಾಬಿಲೋನಿಯಾ ದೇಶವನ್ನು ನಿರ್ಮಿಸಿದಾತನೆಂದು ಭಾವಿಸಿದ್ದರು. ಮತ್ತು ಆ ದೇಶದ ದೊರೆಗಳು ಆ ಸಂತತಿಗೆ ಸೇರಿದವರೆಂದು ನಂಬಿದ್ದರು.

ಅಲ್ಲದೆ ನಕ್ಷತ್ರಗಳ ಚಲನವಲನಗಳನ್ನು ಪರೀಕ್ಷಿಸುತ್ತಿದ್ದ ಬ್ಯಾಬಿಲೋನಿಯರು ಗ್ರಹಣಗಳಾಗುವದನ್ನು ತಿಳಿದಿದ್ದರು. ಗಣಿತ ಶಾಸ್ತ್ರದಲ್ಲಿಯೂ ಅವರು ಮುಂದುವರಿದಿದ್ದರು. ಇದರ ಸಹಾಯದಿಂದ ಭೌತಶಾಸ್ತ್ರಕ್ಕೆ ಸಂಬಂಧಿಸಿದ ಇತರ ವಿಷಯಗಳೂ ಅವರಿಗೆ ಗೊತ್ತಾಗಿದ್ದುವು. ವ್ಯಾಪಾರದಲ್ಲಿ ಅಳತೆ ತೂಕಗಳನ್ನು ರೂಢಿಯಲ್ಲಿ ತಂದವರು ಇವರೇ. ಗ್ರೀಕರು ದಿನಗಳನ್ನು ಗಂಟೆಗಳಾಗಿ ವಿಭಾಗಿಸುವದನ್ನು ಇವರಿಂದಲೇ ಅರಿತರು; ಮತ್ತು ಜ್ಯೋತಿರ್ಗಣಿತವನ್ನೂ ತಿಳಿದಿದ್ದರು.

ಇವೆಲ್ಲವುಗಳ ಸಮಾಲೋಚನೆಯಿಂದ ಬ್ಯಾಬಿಲೋನಿಯರು ಬಹಳ ಹಿಂದಿನ ಕಾಲದಲ್ಲಿಯೇ ಆಡಳಿತ ಪದ್ಧತಿ, ಕಲೆ, ವಿಜ್ಞಾನ, ನಗರ ನಿರ್ಮಾಣ, ಇವುಗಳಲ್ಲಿ ಬಹಳ ಮುಂದುವರಿದಿದ್ದಾರೆಂದು ತಿಳಿದು ಬರುತ್ತದೆ.



## ೧೧ ಫಿನೀಷಿಯಾ

ಈ ದೇಶವು ಪಾಲಿಸ್ಟೈನಿನ ವಾಯವ್ಯದಲ್ಲಿದ್ದ ಒಂದು ಸಣ್ಣ ಪ್ರದೇಶವು. ಪಶ್ಚಿಮದಲ್ಲಿ ಮೆಡಿಟರೇನಿಯನ್ ತೀರ ಪ್ರದೇಶವಾಗಿದ್ದಿತು. ಈ ಜನರು ವ್ಯಾಪಾರದಲ್ಲಿ ಪ್ರಾಮುಖ್ಯತೆಯನ್ನು ಪಡೆದಂತೆ ಇತರ ಜನಾಂಗಗಳು ಪಡೆಯಲಿಲ್ಲ. ಇವರ ನಾಗರಿಕತೆಯು (ಭಾಷೆಯು ಸೆಮಿಟಿಕ್ ಜನಾಂಗಕ್ಕೆ ಸೇರಿದಂತೆಹದು) ಸೆಮಿಟಿಕ್ ಎನಿಸಿಕೊಂಡಿದೆ. ಕ್ರೈಸ್ತಮತ ಗ್ರಂಥಗಳ ರೀತಿಯಿಂದ ಈ ಜನರೂ ಈಜಿಪ್ತ ಜನರ ಮತಕ್ಕೆ ಸೇರಿದವರು. ಜನಸಂಖ್ಯೆಯಲ್ಲಿ ಇವರು ಕಡಿಮೆಯಾದರೂ ಪುರಾತನ ಪ್ರಪಂಚದಲ್ಲಿ ಇವರು ಕಷ್ಟ ಸಹಿಷ್ಣುತೆ ಮತ್ತು ಶಕ್ತಿ ಇವುಗಳಿಂದ ವ್ಯಾಪಾರಸ್ಥರಾಗಿ ಪ್ರಖ್ಯಾತರಾದರು. ಮೆಡಿಟರೇನಿಯನ್ ಸಮುದ್ರದಲ್ಲಿ ಇವರು ಅನೇಕ ವಸಾಹತುಗಳನ್ನು

ಸ್ಥಾಪಿಸಿದರು; ಅಲ್ಲದೆ ಅದರ ತೀರ ಪ್ರದೇಶದಲ್ಲಿ ಅನೇಕ ಪಟ್ಟಣ ಗಳನ್ನು ಕಟ್ಟಿದರು. ವ್ಯಾಪಾರ ಮತ್ತು ಹಡಗ ನಡೆಸುವ ವಿದ್ಯೆಯಿಂದಲೇ ಇವರ ಜೀವನ ಸಾಗಬೇಕಾಗಿದ್ದಿತು. ಅದಕ್ಕನುಗುಣವಾಗಿ ಇವರಿಗೆ ಸ್ವಾಭಾವಿಕವಾಗಿ ಉತ್ತಮ ಬಂದರಗಳಿದ್ದವು. ಇವರ ನಾಗರಿಕತೆಯ ಕುರುಹುಗಳು ಕೆಲವು ದೊರೆತಿವೆ. ಆಗ ಇವರು ಭವ್ಯ ಭವನಗಳನ್ನು ಕಟ್ಟಿದ್ದರು. ಇವರ ನಗರಗಳು ವಿರಾಜಿಸುತ್ತಿದ್ದವು. ಇವುಗಳ ಅವಶೇಷ ಗಳು ಬೇರೆ ಬೇರೆ ಕಡೆಗೆ ಸಾಗಿಹೋಗಿವೆ. ಅಥವಾ ಬೇರೆ ಬೇರೆ ಕೆಲಸ ಗಳಿಗೆ ಉಪಯೋಗಿಸಲ್ಪಟ್ಟವೆಯಾಗಿ ಕಂಡು ಬಂದಿದೆ.

ಫಿನೀಷಿಯಾದಲ್ಲೆಲ್ಲ 'ಸಿಡಾನ್' ಎಂಬುದು ಪುರಾತನ ನಗರವು. ಅದರ ತರುವಾಯ ವಸಾಹತುಗಳಲ್ಲೊಂದಾದ ಟೈರ್‌ವು ಪ್ರಾಮುಖ್ಯತೆ ಪಡೆಯಿತು. ಈ ಪಟ್ಟಣವು ಕ್ರಿ. ಪೂ. ೧೩ನೆಯ ಶತಮಾನದಲ್ಲಿ ಸ್ಥಾಪಿತ ವಾಯಿತು. ಸಮುದ್ರ ತೀರದಲ್ಲಿದ್ದ ಫಿನೀಷಿಯಾಜನರಿಗೆ ಆಫ್ರಿಕಾ, ಯುರೋಪ ಖಂಡಗಳೂ ಮೆಡಿಟರೇನಿಯನ್ ಸಮುದ್ರದ ವಸಾಹತುಗಳೂ ದೂರದ ದಕ್ಷಿಣ ಸಮುದ್ರವೂ ಗೊತ್ತಿದ್ದವು. ಇವರು ಈ ಭೂಭಾಗ ಜಲ ಭಾಗಗಳಿಗೆ ಸಂಚರಿಸುತ್ತಿದ್ದರು. ಇವರು ಆಗಾಗ ಡ್ರೇಕ್, ಹಾಕಿನ್ಸ ಮುಂತಾದ ಆಂಗ್ಲ ನಾವಿಕರಂತೆ ಸಮುದ್ರಕಳ್ಳತನವನ್ನೂ ಗುಲಾಮರ ವ್ಯಾಪಾರವನ್ನು ಮಾಡುತ್ತಿದ್ದರೆಂದು ಯಹೂದಿಯರ ಬರೆವಣಿಗೆಗಳಿಂದ ತಿಳಿದು ಬರುತ್ತದೆ. ಇವರ ಸಾಮರ್ಥ್ಯಕ್ಕೆ ಅಸಾಧ್ಯವಾದುದೂ ಯಾವುದೂ ಇರಲಿಲ್ಲ. ಅಟ್ಲಾಂಟಿಕ್ ಸಾಗರದಲ್ಲೆಲ್ಲ ಇವರು ಸಂಚರಿಸಿ ಸ್ಸಿಲ್ಲಿ ದ್ವೀಪಾಂತರಗಳಿಂದ ಕಬ್ಬಿಣವನ್ನು ತರುತ್ತಿದ್ದರು. ರೋಮನರೊಡನೆ ವ್ಯಾಪಾರದಲ್ಲಿ ಪೈಪೋಟಿ ಮಾಡುತ್ತಿದ್ದರು. ಇವರು ಕೈಗಾರಿಕೆ, ಕುಶಲ ವಿದ್ಯೆಗಳಲ್ಲಿ ಪ್ರವೀಣತೆಯನ್ನು ಪಡೆದಿದ್ದರೆಂದು ಹೋಮರ ಕವಿಯ ವರ್ಣನೆಯಿಂದ ತಿಳಿದು ಬರುತ್ತದೆ. ಬಟ್ಟೆ ನೇಯುವುದು ಗಾಜನ್ನು ಮಾಡುವದು ಇವರಿಗೆ ಗೊತ್ತಿತ್ತು. ಆ ಕಾಲದಲ್ಲಿ ಗಾಜನ್ನು ಪಾತ್ರೆಗಳಿ ಗಾಗಿಯೂ ಒಡವೆಗಳಿಗಾಗಿಯೂ ಉಪಯೋಗಿಸುತ್ತಿದ್ದರು. ಆದ್ದರಿಂದ ಗಾಜಿಗೆ ಹೆಚ್ಚಿನ ಬೆಲೆ ಇದ್ದಿತು. ಅದು ವ್ಯಾಪಾರದ ವಿಶೇಷ ಸರಕಾಗಿತ್ತು.

ಮೇಲ್ಕಂಡ ಸಾಮಾನುಗಳ ವ್ಯಾಪಾರದಿಂದ ಇವರು ಬಹಳ ಐಶ್ವರ್ಯ ವನ್ನು ಗಳಿಸಿದ್ದರು. ಟ್ರೈರ್ ನಗರವು ಗಾಜಿನ ಹುಟ್ಟುವಳಿಗೆ ಹೆಸರು ವಾಸಿಯಾಗಿದ್ದಿತು. ಆದರೆ ಇವೆಲ್ಲಕ್ಕಿಂತ ಇವರ ನಾಗರಿಕತೆಯಲ್ಲಿ ಪುರಾತನ ವಾದುದು ಇವರ ಬರೆವಣಿಗೆಯು. ಅಕ್ಷರಾನುಕ್ರಮ ಬರೆವಣಿಗೆಯು ಇವರಲ್ಲಿ ರೂಢಿಯಲ್ಲಿತ್ತು. ಕೆಲವರು ಈ ಬಗೆಯ ಬರೆವಣಿಗೆಯು ಯಾರಿಂದ ಆರಂಭಿಸಲಾಯಿತೆಂಬಲ್ಲಿ ಅನುಮಾನವುಳ್ಳವರಾಗಿದ್ದಾರೆ. ಮತ್ತು ಕೆಲವರು ಫಿನೀಷಿಯನರು ಈ ಪದ್ಧತಿಯನ್ನು ರೂಢಿಗೆ ತಂದರೆಂದು ನಂಬಲು ಸಾಧ್ಯವಲ್ಲವಾದರೂ ಇವರು ಗ್ರೀಕರ ಮೂಲಕ ಇದನ್ನು ಪ್ರಚಾರಕ್ಕೆ ತಂದು, ಯುರೋಪ ಜನಾಂಗಗಳಲ್ಲೆಲ್ಲ ಅನುಷ್ಠಾನಕ್ಕೆ ಬರುವಂತೆ ಮಾಡಿದರೆಂದು ಅಭಿಪ್ರಾಯ ಪಡುತ್ತಾರೆ. ಈ ಜನರ ನಾಗ ರಿಕತೆಯ ವಿಚಾರವಾಗಿ ನಿರ್ದಿಷ್ಟವಾದ ಆಧಾರಗಳು ದೊರೆತಿಲ್ಲ.

ಫಿನೀಷಿಯನರು ಮರದಿಂದಲೂ ಕಲ್ಲಿನಿಂದಲೂ ಅದ್ಭುತವಾದ ದೇವಸ್ಥಾನಗಳನ್ನು ಕಟ್ಟುವದರಲ್ಲಿ ಆಸಕ್ತರಾಗಿದ್ದರು. ಇವರು ತಮ್ಮ ಬರೆವಣಿಗೆಯನ್ನು ಗ್ರೀಸದಲ್ಲಿ ಪ್ರಚುರಗೊಳಿಸಿದ್ದರು. ಇವರು ಸಂಚರಿಸಿ ದಲ್ಲೆಲ್ಲ ಇವರು ತಮ್ಮ ಮತವನ್ನೂ ದೇವರನ್ನೂ ತಮ್ಮ ವಸಾಹತುಗಳಲ್ಲಿ ಬಳಕೆಗೆ ತಂದರು. ಆದ್ದರಿಂದಲೇ ಇವರ ನಾಗರಿಕತೆಯ ಮೇಲೂ ಹೊರಗಿನ ಪ್ರಭಾವವುಂಟಾಯಿತು. ಸೂರ್ಯ ಚಂದ್ರರನ್ನೂ ನಕ್ಷತ್ರಾದಿ ಗಳನ್ನೂ ಈ ಜನರು ಆರಾಧಿಸುತ್ತಿದ್ದರು. ಸೆಮಿಟಿಕ್ ಜನಾಂಗದವರು ಪೂಜಿಸುತ್ತಿದ್ದ ಬಾಲ್ ದೇವರನ್ನು ಇವರೂ ಪೂಜಿಸುತ್ತಿದ್ದರು. ಇವರಲ್ಲಿ ನರಬಲಿಯನ್ನು ಕೊಡುವ ಕ್ರೂರ ಪದ್ಧತಿಯಿತ್ತು. ಪರ್ಶಿಯನರ ಆಳಿಕೆಗೆ ಒಳಗಾದ ನಂತರ ಈ ಪದ್ಧತಿಯು ಕೊನೆಗಂಡಿತು.

ಇವರ ರಾಜಕೀಯ ಪದ್ಧತಿಯು ಸರಳವೂ ಸ್ವತಂತ್ರವೂ ಆಗಿದ್ದು, ಪ್ರತಿ ಸಣ್ಣ ದೇಶದಲ್ಲೂ ಸ್ವತಂತ್ರವಾಗಿ ಆನುವಂಶಿಕ ರಾಜ್ಯಪದ್ಧತಿಯಿತ್ತು. ಆದರೂ ಕೆಲವು ಮುಖ್ಯ ವಿಷಯಗಳಲ್ಲಿ ಇವರು ಒಗ್ಗಟ್ಟಿನಿಂದ ವರ್ತಿ ಸುತ್ತಿದ್ದರು.

ಕೆಲವು ಕಾಲದ ನಂತರ ಫಿನೀಷಿಯವು ಪರ್ಶಿಯದ ಒಂದು ಭಾಗ ವಾಗಿ ಅದಕ್ಕೆ ಕಪ್ಪನ್ನು ಸಲ್ಲಿಸುತ್ತಿತ್ತು. ಇದರ ತರುವಾಯ ಗ್ರೀಕರು, ಕಾರ್ಥೇಜಿನಿಯನರು ಪ್ರಬಲರಾದ ಮೇಲೆ ಇವರ ವ್ಯಾಪಾರಕ್ಕೆ ಕಡಿತ ಬಿದ್ದಿತು. ಆದರೂ ಇವರು ಸೈಪ್ರಸದಲ್ಲೂ ಕ್ರೀಟಿನಲ್ಲೂ ಗ್ರೀಸ, ಸಿಸಿಲಿ, ಸಾರ್ಡಿನೀಯಾ, ಬಾಲ್ಟಿಯಾರಿಕ್ ದ್ವೀಪ, ಸ್ಪೇನ ಮತ್ತು ಆಫ್ರಿಕಾ ತೀರ ಪ್ರದೇಶಗಳಲ್ಲೂ ತಮ್ಮ ವಸಾಹತುಗಳನ್ನು ಸ್ಥಾಪಿಸಿದ್ದರು. ಕಾರ್ಥೇಜಿನಿಯನರು ಕ್ರಿ. ಪೂ. ೮೪೧ರಲ್ಲಿ ಪ್ರಾಬಲ್ಯಕ್ಕೆ ಬಂದ ಮೇಲೆ ಇವರು ಕ್ಷೀಣ ದಶೆಗೆ ಬಂದರು.

ಪ್ರಾಚೀನ ಕಾಲದಲ್ಲಿ ಫಿನೀಷಿಯನರು ಸಾಹಸಿಗಳೂ ವ್ಯಾಪಾರ ಚತುರರೂ ಆಗಿ, ನಾಗರಿಕತೆಯಲ್ಲಿ ಮುಂದುವರಿದಿದ್ದರು.

---

## ೧೨ ಲಿಡಿಯಾ

ಈ ದೇಶವನ್ನು ಪರ್ಶಿಯಾ ದೊರೆಯಾದ ಸೈರಸನು ಗೆದ್ದನೆಂದು ಮೇಲೆ ವಿವರಿಸಿದೆ. ಸ್ವಾಭಾವಿಕ ಲಕ್ಷಣಗಳು, ಚೆನ್ನಾದ ಹವೆ, ಸೊಗಸಾದ ಬೆಳೆ, ಫಲವತ್ತಾದ ಕಣಿವೆಗಳು ಮತ್ತು ತೀರ ಪ್ರದೇಶಗಳು ಇತ್ಯಾದಿ ಪ್ರಕೃತಿ ಸಂಪತ್ತುಳ್ಳ ಈ ಏಷ್ಯಾ ಮೈನರ ದೇಶವು ಅತ್ಯಂತ ಸೌಂದರ್ಯದ ನೆಲೆವೀಡು, ಸಂಪತ್ತಿನ ತೌರಮನೆ ಎನಿಸುತ್ತದೆ. ಇವುಗಳಲ್ಲದೆ ಸ್ವಾಭಾವಿಕವಾದ ಒಳ್ಳೆಯ ಬಂದರಗಳುಳ್ಳ ಈ ದೇಶವು ವ್ಯಾಪಾರಕ್ಕೆ ಅತಿ ಅನುಕೂಲವಾದದು. ಆದರೆ ಇಷ್ಟೆಲ್ಲ ಪ್ರಕೃತಿ ಸೌಕರ್ಯಗಳಿದ್ದರೂ ಈ ದೇಶವು ಚರಿತ್ರೆಯಲ್ಲಿ ತನ್ನ ಪ್ರಾಮುಖ್ಯತೆಯನ್ನು ಗಳಿಸಲಿಲ್ಲ. ಲಿಡಿಯಾ ಸಾಮ್ರಾಜ್ಯವು ಕೊನೆಗಂಡ ಮೇಲೆ ಈ ದೇಶವು ಪರಕೀಯರ ಪಾಲಾಯಿತು.

ಲಿಡಿಯಾ ದೇಶದ ಜನರು ಆರ್ಯರಂತೆ ಹೊರಗಿನವರು. ಅವರ ನಾಗರಿಕತೆ ಗ್ರೀಕರ ನಾಗರಿಕತೆಯನ್ನು ಹೋಲುತ್ತಿತ್ತು. ಈ ದೇಶವನ್ನು ಎರಡು ಸಂತತಿಯವರು ಆಳಿದರು. ಇವರ ಆಳಿಕೆ ಕ್ರಿ. ಪೂ. ೧೨೦೦ರಿಂದ ಆರಂಭವಾಯಿತು. ಇವರಲ್ಲಿ ಕ್ರೋಸಸ್ ದೊರೆಯೇ ಹೆಸರುವಾಸಿಯಾದ ವನು. ಈತನನ್ನು ಗ್ರೀಕರು ಕೂಡ ಗೌರವಿಸುತ್ತಿದ್ದರು. ಲಿಡಿಯಾ ಸಾಮ್ರಾಜ್ಯವು ಕ್ರಿ. ಪೂ. ೫೪೬ರಲ್ಲಿ ಕೊನೆಗಂಡು ಪರ್ಶಿಯಾದ ಆಧೀನ ವಾಯಿತು.



## ೧೩ ಇಜಿಪ್ತ

ಪುರಾತನರು ಇಜಿಪ್ತವು ಏಷಿಯಾ ಖಂಡಕ್ಕೆ ಸೇರಿತ್ತೆಂದು ಭಾವಿ ಸಿದ್ದರು. ಪ್ರಾಯಶಃ ಇಜಿಪ್ತಿನ ಸಂಸ್ಥೆಗಳು—ನಾಗರಿಕತೆಯು ಪುರಾತನ ದೇಶಗಳಂತೆಹದೇ ಆಗಿದ್ದುದರಿಂದ ಆ ರೀತಿ ಭಾವಿಸಲು ಕಾರಣವಾಗಿರ ಬೇಕು. ನೈಲ ನದಿಯು ಇಜಿಪ್ತಿನ ಜೀವನಾಡಿಯು. ಈ ನದಿಯು ಇಲ್ಲ ದಿದ್ದರೆ ಈ ದೇಶವು ದೊಡ್ಡ ಮರುಭೂಮಿಯಾಗಿರುತ್ತಿತ್ತು. "ಭಾರತದಲ್ಲಿ ಸಿಂಧಪ್ರಾಂತದಲ್ಲಿ ಸಿಂಧೂ ನದಿಯು ಹೇಗೊ ಇಜಿಪ್ತದಲ್ಲಿ ನೈಲ ನದಿಯು ಹಾಗೆ." ಎಂದು ಅಭಿಪ್ರಾಯಪಟ್ಟಿದುದಾಗಿದೆ. ನೈಲ ನದಿಯು ವ್ಯವ ಸಾಯಕ್ಕೆ ಅನುಕೂಲವಾಗಿರುವಂತೆ ಇನ್ನಿತರ ನದಿಗಳು ಆಗಿಲ್ಲ. ಈ ನದಿಯ ಧಡದಲ್ಲಿ ಪ್ರಾಚೀನ ನಾಗರಿಕತೆಯನ್ನು ಅರಂಭಿಸಿದ ಜನರು ನೆಲೆಸಿದ್ದರು. ಈ ದೇಶದ ಪ್ರಾಕೃತಿಕ ಸಂಪತ್ತು ಭಾರತದಂತೆ ಪರಕೀಯರನ್ನು ಆಕರ್ಷಿಸಿದೆ.

ಇಜಿಪ್ತದ ಜನರಲ್ಲಿ ಭಾರತ ದೇಶದ ಸಮಾಜದಂತೆ ಜಾತಿಯ ಪದ್ಧತಿಗಳಿದ್ದವು. ಉತ್ತಮ ಕುಲದವರು ಕಕೇಷಿಯಾ ಸಂತತಿಗೆ

ಸೇರಿದವರೂ ಉಳಿದವರು ನಿಗ್ರೋ ಸಂತತಿಗೆ ಸೇರಿದವರೂ ಆಗಿದ್ದರೆಂದು ಚರಿತ್ರಕಾರರ ಅಭಿಪ್ರಾಯ.

ಇಜಿಪ್ತಿನ ಚರಿತ್ರೆಯನ್ನು ತಿಳಿಯಲು ಗ್ರೀಕರ ಬರೆವಣಿಗೆ, ಕ್ರೈಸ್ತ ಮತ ಗ್ರಂಥಗಳು ಮತ್ತು ಆ ಜನರ ನಾಗರಿಕತೆಯಲ್ಲಿ ಉಳಿದಿರುವ ಅವಶೇಷಗಳೂ ಆಧಾರವಾಗಿವೆ. ಎಲ್ಲಕ್ಕಿಂತಲೂ ಅವರ ಶಿಲ್ಪಕಲೆ ಮತ್ತು ವಾಸ್ತು ಶಿಲ್ಪಗಳು ಕಣ್ಣಾರೆ ನೋಡಬಹುದಾದ ದೃಷ್ಟಾಂತಗಳಾಗಿವೆ. ಅವು ಅವರ ಮತದ ನಂಬಿಕೆಯ, ಸಾಮಾಜಿಕ ಪದ್ಧತಿಯ ಚಿಹ್ನಗಳಾಗಿವೆ. ಥೀಬ್ಸ್ ನಗರವು ಇಜಿಪ್ತಿನ ಪುರಾತನ ರಾಜಧಾನಿಯಾಗಿತ್ತು. ನೈಲ ನದಿಯ ಉಭಯ ಪಾರ್ಶ್ವದಲ್ಲೂ ಕಟ್ಟಲ್ಪಟ್ಟದ್ದ ಈ ಪುರಾತನ ನಗರದಲ್ಲಿ ದೊರೆತಂಥ ಪುರಾತನ ಕಟ್ಟಡಗಳು ಎಲ್ಲಕ್ಕೂ ಮಿಗಿಲಾದ ಹೆಗ್ಗುರುತುಗಳಾಗಿವೆ. ಇಂದಿಗೂ ಇಜಿಪ್ತ ದೇಶದಲ್ಲಿ ಪ್ರಾಚೀನ ಕಲೆಯು ಆ ದೇಶದ ನಾಗರಿಕತೆಯ ಹೆಮ್ಮೆಯ ಅಥವಾ ಔನ್ನತ್ಯದ ಹೆಗ್ಗುರುತಾಗಿ ನಿಂತಿದೆ.

ಇವುಗಳಲ್ಲದೆ ಅವರ ಸಮಾಧಿಗಳೂ ದೇಶದ ಅನೇಕ ಕಡೆಗಳಲ್ಲಿ ವಿಶೇಷವಾಗಿ ದೊರೆತಿವೆ. ಇವುಗಳಿಂದ ಆ ಜನರ ಮತವು ತಿಳಿಯಬರುತ್ತದೆ. ಅಲ್ಲದೆ ಪುರಾತನ ಇಜಿಪ್ತಿನ ವೈಭವವನ್ನು ಸೂಚಿಸತಕ್ಕ ದೃಷ್ಟಾಂತಗಳೂ ಆಗಿವೆ. ಪ್ರಾಯಶಃ ಇಜಿಪ್ತಿನ ಜನರು ಕ್ರಿ. ಪೂ. ೧೦೦೦ಕ್ಕೆ ಮೊದಲೇ ಇವುಗಳನ್ನು ಕಟ್ಟಿರಬೇಕು. ಈ ದೇಶದ ಸ್ಮಾರಕಗಳ ಮೇಲೆ ಕೆತ್ತಿರತಕ್ಕ ಶಾಸನಗಳು, ಚಿತ್ರಿಸಿರತಕ್ಕ ಗಿಡಗಳು, ಗ್ರಹಗಳು, ಪ್ರಾಣಿಗಳು, ಮನುಷ್ಯಾಕೃತಿಗಳು ಮನೆಯ ಪದಾರ್ಥಗಳು, ಆಯುಧಗಳು, ವಿಚಿತ್ರ ಆಕೃತಿಗಳು ಈ ದೇಶದ ಚರಿತ್ರೆಯನ್ನು ತಿಳಿಯಲು ಸಹಕಾರಿಗಳಾಗಿವೆ. ಇವುಗಳ ಅರ್ಥಮಾಡಲು ಯತ್ನಿಸಿದವರು ಡಾ. ಯಂಗ ಮತ್ತು ಷಾಂಪೋಲಿಯನ್. ಇವರ ಈ ರೀತಿಯ ಕುತೂಹಲಕ್ಕೆ ಗ್ರೀಕರು ಭಾಷಾಂತರ ಮಾಡಿದ ಒಂದು ಗೂಢ ಲಿಪಿಯ ಶಾಸನದಲ್ಲಿ ಟಾಲಮಿಯಾ Ptalemy ಎಂಬ ಹೆಸರಿದ್ದುದೇ ಕಾರಣವು.

ಈ ದೇಶದ ಚರಿತ್ರೆಯನ್ನು ಹೆರೊಡೋಟಸ್, ಡಯೋಡೋರಸ್ ಮತ್ತು ಸ್ಟ್ರೇಟೊ ಇವರು ಬರೆದರು. ಈ ದೇಶದಲ್ಲಿ ಪುರೋಹಿತರ

Priests ಮತ್ತು ಸೈನಿಕರ ಸಂಗಡಗಳೇ ಮುಖ್ಯವಾಗಿದ್ದುವು. ಅವರೇ ದೇಶವನ್ನಾಳಿದವರು. ಇಲ್ಲಿಯ ಸಾಮಾಜಿಕ ವ್ಯವಸ್ಥೆಯು ಭಾರತ ದೇಶದಲ್ಲಿಯ ವ್ಯವಸ್ಥೆಯನ್ನು ಹೋಲುತ್ತಿತ್ತು.

ಇಜಿಪ್ತಿನಲ್ಲಿ 'ಫೇರೋಹ್ಸ' ಎಂಬ ಬಿರುದಾಂಕಿತರಾದ ಆನುವಂಶಿಕ ರಾಜರು ಆಳುತ್ತಿದ್ದರು. ರಾಜವಂಶವು ಕೊನೆಗಂಡ ನಂತರ ಮೇಲಿನ ಎರಡು ವರ್ಗಗಳಲ್ಲಿ ಒಬ್ಬ ಹೊಸ ದೊರೆಯನ್ನು ಆರಿಸುತ್ತಿದ್ದರು. ರಾಜನ ಅಧಿಕಾರವು ದೇಶದಲ್ಲಿ ಎಲ್ಲಕ್ಕೂ ಮಿಗಿಲಾಗಿದ್ದಿತು. ಅದರ ವ್ಯಾಪ್ತಿಯು ದೇಶಕ್ಕೆಲ್ಲ ಅನ್ವಯಿಸುವಂತಿತ್ತು. ಆತನನ್ನು ಎಲ್ಲರೂ ವಿಶೇಷವಾಗಿ ಗೌರವಿಸುತ್ತಿದ್ದರು. ಆತನ ಆಡಳಿತದ ಕ್ರಮವು ಮತ್ತು ದಿನಚರಿಯ ಕರ್ತವ್ಯಗಳು ಪುರೋಹಿತ ವರ್ಗಕ್ಕೆ ಸೇರಿದವರು ಗೊತ್ತು ಮಾಡಿದ ನಿಯಮದಂತೆ ನಡೆಯಬೇಕಾಗಿದ್ದಿತು. ಪುರೋಹಿತ ಜಾತಿಯವರೇ ಮಂತ್ರಿತ್ವವನ್ನು ನಡೆಸುತ್ತಿದ್ದರು.

ಪುರೋಹಿತ ಸಂಗಡದವರಲ್ಲಿಯೂ ವೃತ್ತಿಗಳಿದ್ದವು. ಅವರೇ ಉಪಾಧ್ಯಾಯರಾಗಿರಲು ಅರ್ಹರಾಗಿದ್ದುದರಿಂದ ಜೀವನದ ಉತ್ತಮ ವೃತ್ತಿಗಳನ್ನು ಅವರು ಅವಲಂಬಿಸಿದ್ದರು. ಸೈನಿಕರು ದೇಶದ ವಿವಿಧ ಭಾಗಗಳಲ್ಲಿ ವಾಸಿಸುತ್ತಿದ್ದರು.

ಈ ದೇಶದ ಜನರು ಪರದೇಶದವರ ಮೇಲೆ ಪದೇ ಪದೇ ಹೋರಾಡ ಬೇಕಾಗಿದ್ದ ಪ್ರಮೇಯಗಳು ಇದ್ದವು. ಅಲ್ಲದೆ ಪ್ರಬಲ ರಾಷ್ಟ್ರಗಳ ದಾಳಿಯಿಂದ ರಕ್ಷಿಸಿಕೊಳ್ಳಬೇಕಾಗಿತ್ತು. ಈ ಕಾರಣಗಳಿಂದ ಇವರಿಗೆ ಯುದ್ಧದಲ್ಲಿ ವಿಶೇಷ ಆಸಕ್ತಿಯಿತ್ತು. ಆ ವಿದ್ಯೆಯಲ್ಲಿ ಅವರು ಕೆಲವು ವಿಧಾನಗಳನ್ನು ಅರಿತಿದ್ದರು. ಭೂಮಿಯ ಮೇಲೆ ಮತ್ತು ಸಮುದ್ರದ ಮೇಲೆ ವಿಶೇಷವಾಗಿ ಅವರು ವ್ಯಾಪಾರವನ್ನು ಪರದೇಶಗಳೊಡನೆ ನಡೆ ಸುತ್ತಿದ್ದರು. ಪ್ರಾಯಶಃ ತಾವಾಗಿಯೇ ಅವರು ಸಂಚರಿಸಿ ವ್ಯಾಪಾರ ನಡೆ ಸುವದರಲ್ಲಿ ಆಸಕ್ತರಾಗಿರಲಿಲ್ಲವೆಂದು ತಿಳಿದು ಬರುತ್ತದೆ. ಮತ್ತು ಇತರ

ದೇಶದ ಸಂಸ್ಕೃತಿಯನ್ನೂ ಹೇಳುವಾಗಿ ಕಾಣುತ್ತಿದ್ದರೆಂದು ಕಾಣಬರುತ್ತದೆ. ಆದ ಕಾರಣ ಅವರ ನಾಗರಿಕತೆಯಲ್ಲಿ, ಅವರ ಸಂಸ್ಥೆಗಳ ರಚನೆಯಲ್ಲಿ, ಶಾಸನಗಳ ಸ್ವರೂಪದಲ್ಲಿ, ಸಂಪ್ರದಾಯಗಳಲ್ಲಿ ಅವರದೇ ಒಂದು ಬಗೆಯ ವೈಶಿಷ್ಟ್ಯವು ಕಾಣಬರುತ್ತದೆ.

ಅವರ ಗೃಹಕೃತ್ಯ ಜೀವನವು ಇತರರಿಗಿಂತ ಉತ್ತಮವಾಗಿತ್ತೆಂದು ಸ್ಪಷ್ಟವಾಗುತ್ತದೆ. ಕೆತ್ತಿಗೆಯ ಕೆಲಸ, ವ್ಯವಸಾಯ, ಮೀನ ಹಿಡಿಯುವದು, ಬೇಟೆಯಾಡುವದು, ಮರಗೆಲಸ, ಕಲ್ಲಿನ ಕೆಲಸ, ನೇಯ್ಗೆ, ಬಣ್ಣ ಹಾಕುವದು, ಶಿಲ್ಪಕಲೆ, ಚಿನ್ನದ ಒಡವೆಗಳನ್ನು ಮಾಡುವದು ಇವುಗಳಲ್ಲಿ ಅವರು ನಿರತರಾಗಿರುತ್ತಿದ್ದರೆಂದು ಅವರ ಚರಿತ್ರೆಯಿಂದ ತಿಳಿದು ಬರುತ್ತದೆ. ಇದಲ್ಲದೆ ಪೆಪೀರಸ್ ಎಂಬ ಗಿಡದ ಎಲೆಗಳನ್ನು ಕಾಗದದಂತೆ ಅವರು ಉಪಯೋಗಿಸುತ್ತಿದ್ದರೆಂದು ತಿಳಿದು ಬಂದಿರುತ್ತದೆ.

ಇಜಿಪ್ತ ದೇಶದ ಜನರ ಜೀವನದಲ್ಲಿ ಮತಕ್ಕೆ ಪ್ರಾಮುಖ್ಯತೆಯಿತ್ತು. ಪ್ರಕೃತಿಯ ಉಚ್ಚ ಶಕ್ತಿಗಳನ್ನು ಅಥವಾ ಸಾಕ್ಷಾತ್ಕಾರಗಳನ್ನು ಅವರು ಪೂಜಿಸುತ್ತಿದ್ದರು. ಮತ್ತು ಪ್ರಾಣಿಗಳನ್ನೂ ಆರಾಧಿಸುತ್ತಿದ್ದರು. ಆತ್ಮದ ವಿಷಯವಾಗಿ ಅವರಿಗೆ ಒಂದು ಬಗೆಯ ನಂಬಿಗೆಯಿತ್ತು. ಮೃತ ಶರೀರಗಳನ್ನು ಭದ್ರವಾಗಿ ಉಳಿಸಿ ಅವುಗಳ ಮೇಲೆ ಸ್ಮಾರಕಗಳನ್ನು ಕಟ್ಟುತ್ತಿದ್ದರು. ಇವುಗಳ ನಿರ್ಮಾಣಕ್ಕಾಗಿ ವಿಶೇಷ ಹಣವನ್ನು ಅವರು ವೆಚ್ಚ ಮಾಡುತ್ತಿದ್ದರು. ಮೃತಶರೀರವನ್ನು ಬಟ್ಟೆಯಿಂದ ಸುತ್ತಿ, ವಿವಿಧ ಆಭರಣಗಳಿಂದ ಅಲಂಕರಿಸಿ, ಶಾಸನ ಸಮೇತ ಅದನ್ನವರು ಸ್ಮಾರಕ ಕಟ್ಟುವಲ್ಲಿ ಇಡುತ್ತಿದ್ದರು. ದೇಹವನ್ನು ತ್ಯಜಿಸಿದ ಜೀವವು ಕಾಲಕ್ರಮದಲ್ಲಿ ಪುನಃ ಮೃತಶರೀರವನ್ನು ಸೇರುತ್ತದೆಂದು ಅವರು ತಿಳಿದಿದ್ದರು. ಆತ್ಮನಿತ್ಯತೆಗೂ ಮೃತಶರೀರ ರಕ್ಷಣೆಗೂ ಅರ್ಥವಿಲ್ಲವೆಂದು ಟೀಕಿಸಬಹುದು. ಆದರೆ ಅಂದು ಆ ಜನರ ಸಂಸ್ಕೃತಿಯ ಅಂತಸ್ತು ಆ ರೀತಿಯಿತ್ತು. ಆ ಕಾರಣದಿಂದಲೇ ಅವರು ಸ್ಮಾರಕಗಳಲ್ಲಿ ಆತ್ಮನು ಮೃತಶರೀರವನ್ನು ಪ್ರವೇಶಿಸುವಂತೆ ಒಂದು ಸಣ್ಣದಾರಿಯನ್ನು ಬಿಟ್ಟು ಕಟ್ಟುತ್ತಿದ್ದರು.

ಈ ದೇಶದ ಜನರು ಜ್ಯೋತಿಃಶಾಸ್ತ್ರವನ್ನೂ ತಿಳಿದವರಾಗಿದ್ದರು ಇವರಿಗೆ ಬರೆವಣಿಗೆಯು ಗೂಢಲಿಪಿಯ ಸ್ವರೂಪದಲ್ಲಿ ಬರುತ್ತಿತ್ತು. ಆದ ಕಾರಣ ಗೂಢಲಿಪಿಯನ್ನೇ ಇವರು ಬರೆವಣಿಗೆಯಲ್ಲಿ ಶಾಸನಗಳಲ್ಲಿ ಉಪ ಯೋಗಿಸುತ್ತಿದ್ದರು. ಈ ಜನರಿಂದ ಫಿನಿಷಿಯನ್ ಜನರು ಗೂಢಲಿಪಿ ಯನ್ನು ಅಭ್ಯಾಸ ಮಾಡಿಕೊಂಡು ವರ್ಣಮಾಲೆಯನ್ನು ಪ್ರಚಾರಕ್ಕೆ ತಂದರೆಂದು ವಿದಿತವಾಗಿದೆ.

ಈ ದೇಶದ ನಾಗರಿಕತೆಯಲ್ಲಿ ವಿಶೇಷವಾದದ್ದೆಂದರೆ ವಾಸ್ತುಶಿಲ್ಪ, ಮತ್ತು ಕೆತ್ತಿಗೆಯ ಕೆಲಸ. ಥೀಬ್ಸ್ ನಗರದಲ್ಲಿಯೂ ಕಾರ್ನಾಕ್ ಮತ್ತು ಲಕ್ಸಾರಗಳಲ್ಲಿಯೂ ದೊರೆತಿರುವ ಕಟ್ಟಡಗಳ ಜೊತೆಗೆ ದೇವಾಲಯಗಳೂ ಇವೆ. ಮಧ್ಯ ಇಜಿಪ್ತಿನಲ್ಲಿರತಕ್ಕ ಸ್ಮಾರಕಗಳು ಪ್ರಪಂಚವನ್ನೇ ವಿಸ್ಮಯ ಗೊಳಿಸುವಂಥವಾಗಿವೆ. ಇವುಗಳ ಜೊತೆಗೆ ಬಣ್ಣ ಹಾಕುವಲ್ಲಿಯೂ ಇವರ ಕುಶಲತೆಯು ಕಂಡು ಬರುತ್ತದೆ. ದೇವರನ್ನು ಮನುಷ್ಯಾಕಾರದಲ್ಲಿ ನಿರ್ಮಿಸಿ, ಟಗರು, ಬಸವ ಇವುಗಳ ಮುಖಾಕೃತಿಯನ್ನು ಕೊಡುತ್ತಿದ್ದರು ಪ್ರಾಯಶಃ ಈ ಜನರ ಮೂಲ ಭಾವನೆಯ ಪ್ರಕಾರ ಜೀವಶಕ್ತಿಯು ಪ್ರಾಣಿಯಲ್ಲಿಯೂ ಮನುಷ್ಯನಲ್ಲಿಯೂ ಒಂದೇ ಎಂದಿರಬೇಕು. ಸಂಕ್ಷಿಪ್ತ ದಲ್ಲಿ ಇಜಿಪ್ತ ದೇಶದ ಕಲೆಯು ಅತಿ ಪುರಾತನವೂ ಅದ್ಭುತವೂ ಮತ್ತು ಕುಶಲತೆಯಿಂದ ಕೂಡಿದುದೂ ಆಗಿದೆ. ಆದರೆ ಕಲೆಯ ಪರಮಾವಧಿ ಅಲ್ಲಿಗೆ ಮುಗಿಯಲಿಲ್ಲ.

ಇಜಿಪ್ತನ್ನು ಆಳಿದ ರಾಜರುಗಳ ವಿಷಯವಾಗಿ ಕೆಲವು ಅಂಶಗಳು ತಿಳಿದು ಬಂದಿವೆ. ಈ ದೇಶವನ್ನು ಕಾಲಗಣನೆಯ ಶಾಸ್ತ್ರರೀತ್ಯಾ ಮೆನಿಸ್ ಎಂಬ ಪುರಾಣ ಪ್ರಸಿದ್ಧ ವ್ಯಕ್ತಿಯು ಕ್ರಿ. ಪೂ. ೩೪೯೨ರಲ್ಲಿ ಸ್ಥಾಪಿಸಿದನು ಇವರಲ್ಲೆಲ್ಲ ೧೯ನೆಯ ರಾ· ವಂಶದ ರಾಮೆಸ್ಸ್‌ರವರೇ ಪ್ರಖ್ಯಾತರಾದರು. ಈ ರಾಜರ ಕಾಲದಲ್ಲಿ ಇಜಿಪ್ತಿನ ವಿಸ್ತಾರವು ಪರ್ಶಿಯಾ ಗಡಿಯ ವರೆಗೂ ಕಾಸ್ಪಿಯನ್ ಸಮುದ್ರ ತೀರದ ವರೆಗೂ ಹಬ್ಬಿದ್ದಿತು. ಮತ್ತು ಅದಕೆ ತಕ್ಕ ನೌಕಾಬಲವೂ ಇತ್ತು. ೨೦ನೆಯ ಸಂತತಿಯವರ ಕಾಲದಲ್ಲಿಯೂ ಇದು ಸಂಪತ್ ಸಮೃದ್ಧಿಯಿಂದ ಕೂಡಿತ್ತು. ಕ್ರಿ. ಪೂ. ೫೨೫ರಲ್ಲಿ

ಪರ್ಶಿಯಾ ಚಕ್ರವರ್ತಿಯಾದ ಕ್ಯಾಂಬಿಸನ್‌ನು ಈ ದೇಶಕ್ಕೆ ಮುತ್ತಿಗೆ ಹಾಕಿ ಇದನ್ನು ಗೆದ್ದನು. ಆ ತರುವಾಯ ಇದು ಪರ್ಶಿಯಾ ದೇಶದ ಆಡಳಿತ-ಕ್ಕೊಳಗಾಯಿತು.

ಮೇಲೆ ವಿವರಿಸಿರತಕ್ಕ ಅಂಶಗಳ ಪರ್ಯಾಲೋಚನೆಯಿಂದ ಬಹಳ ಹಿಂದಿನ ಕಾಲದಲ್ಲಿಯೇ ಇಜಿಪ್ಟಿನಲ್ಲಿ ಶ್ರೇಷ್ಠತಮವಾದ ನಾಗರಿಕತೆ ಬೆಳೆದಿತ್ತೆಂದು ವಿಶದಪಡುತ್ತದೆ.

---

## ೧೪ ಹರಪ್ಪ ಮತ್ತು ಮೋಹೆಂಜೊದಾರೊ

“ಮೋಹೆಂಜೊದಾರೊ ಇದು ಅತ್ಯಂತ ಮಹತ್ವದ ಭೂಗರ್ಭ ಸಂಶೋಧನೆಯು. ಜಗತ್ತಿಗೆ ಹೊಸದೊಂದು ಐತಿಹಾಸಿಕ ದೃಶ್ಯವನ್ನೇ ಇದು ತೆರೆದು ತೋರಿಸಿದೆ. ಮತ್ತು ಭಾರತ ಇತಿಹಾಸದ ವಿದ್ಯಾರ್ಥಿಗಳ ತಂಡಗಳಿಗೆ ಇದು ದೊಡ್ಡದೊಂದು ಸಂಶೋಧಕ ಭೂಮಿಯಾಗಿದೆ.”

ಹೀಗೆಂದು “ಮೋಹೆಂಜೊದಾರೊ ಆಶ್ಚರ್ಯಗಳು” ಎಂಬ ಶಿರೋನಾಮೆಯಲ್ಲಿ ಬರೆದ ತಮ್ಮ ಲೇಖನದಲ್ಲಿ ಪ್ರೊಫೆಸರ ಕೆ. ಎನ್. ವಾಸ್ವಾನಿಯವರು ತಮ್ಮ ಕೊನೆಯ ನಿರ್ಣಯವನ್ನು ವ್ಯಕ್ತಪಡಿಸಿದ್ದಾರೆ. (ಮಾಡರ್ನ ರಿವ್ಯೂ-ಜಾನೆವರಿ ೧೯೪೬) ಮೇಲೆ ಕೊಡಲಾಗಿರುವ ವಾಕ್ಯವು ಅರ್ಥಗರ್ಭಿತವಾಗಿದೆ; ಒಂದು ಜನಾಂಗದ ಸಂಸ್ಕೃತಿಯ ಅಂತಸ್ತುಗಳನ್ನು ತಿಳಿಯಲು ಸಹಾಯಕವಾಗಿದೆ.

ಇಪ್ಪತ್ತನೆಯ ಶತಮಾನದಲ್ಲಿ ಭಾರತ ಸರಕಾರದ ಪ್ರಾಚೀನ ವಸ್ತು ಸಂಶೋಧನಾ ಇಲಾಖೆಯವರು ನಡೆಸಿದ ಕಾರ್ಯಗಳ ಪರಿಣಾಮವಾಗಿ ಭಾರತೀಯರ ಇತಿಹಾಸವು ಪುಷ್ಟಿಗೊಂಡಿದೆ. ಮತ್ತು ಅದಕ್ಕೆ ಒಂದು

ರೀತಿಯ ವೈಶಿಷ್ಟ್ಯವು ದೊರೆತಿದೆ. ಮೇಲ್ಕಂಡ ಇಲಾಖೆಯ ಡಾಯ-ರೆಕ್ಟರರಾಗಿದ್ದ ಸರ್ ಜಾನ್ ಮಾರ್ಷಲ್‌ರವರ ನೇತೃತ್ವದಲ್ಲಿ ಪೂರ್ವ ಬಲೂಚಿಸ್ಥಾನದಲ್ಲಿ ಹರಪ್ಪ ಮತ್ತು ಸಿಂಧೂ ಪ್ರಾಂತದ ಲಾರ್ಖಾನ ಡಿಸ್ಟ್ರಿಕ್ಟಿನಲ್ಲಿಯ ಮೋಹೆಂಜೊದಾರೊ ಎಂಬ ಎರಡು ಪ್ರದೇಶಗಳಲ್ಲಿ ನಡೆಸಿದ ಭೂಶೋಧನೆಗಳ ಫಲವಾಗಿ, ಸುಮಾರು ಕ್ರಿ. ಪೂ. ೫೦೦೦ ವರ್ಷಗಳ ಹಿಂದೆ ಸಿಂಧು ನದಿಯ ಕಣಿವೆಯಲ್ಲಿ ಅತಿ ಊರ್ಜಿತ ಸ್ಥಿತಿಯಲ್ಲಿದ್ದ ಒಂದು ನಾಗರಿಕತೆಯ ವಿವರಗಳು ತಿಳಿದು ಬಂದಿವೆ. ಇದನ್ನು ಕೆಲವು ಚರಿತ್ರೆಕಾರರು "ಸೈಂಧವೀ ಸಭ್ಯತೆ"ಯೆಂದು ಕರೆದಿದ್ದಾರೆ. ಮಾರ್ಷಲ್‌ರವರ ಅಭಿಪ್ರಾಯದಂತೆ, ಈ ನಾಗರಿಕತೆಯು ಆರ್ಯರ ನಾಗರಿಕತೆಗಿಂತ ಪ್ರಾಚೀನವಾದ ಮತ್ತು ವೇದಗಳಲ್ಲಿ ದಸ್ಯುಗಳು ಅಥವಾ ಅಸುರರು ಎಂದು ಪರಿಗಣಿಸಲ್ಪಟ್ಟಿರುವವರಿಗೆ ಸಂಬಂಧಪಟ್ಟದ್ದು. ಪ್ರಾಯಶಃ ಆರ್ಯರು ಈ ದೇಶಕ್ಕೆ ಬಂದ ಮೇಲೆ ಸುಮಾರು ಕ್ರಿ. ಪೂ. ೨೦೦೦ ಅಥವಾ ೩೦೦೦ದಲ್ಲಿ ಇದನ್ನು ನಾಶಗೊಳಿಸಿರಬೇಕು. ಇಲ್ಲಿ ಇಜಿಪ್ತ ಅಥವಾ ಪ್ರಾಚೀನ ಸುಮೆರಿಯಾದಲ್ಲಿ ದೊರೆತಂಥ ಭವ್ಯ ರಾಜಸಮಾಧಿಗಳಾಗಲಿ, ಅಥವಾ ದೇವಾಲಯಗಳಾಗಲಿ ದೊರೆತಿಲ್ಲ. ಈ ಜನರು ದ್ರಾವಿಡ ಜನಾಂಗಕ್ಕೆ ಸೇರಿದವರು; ಮತ್ತು ಇವರ ನಾಗರಿಕತೆಯು ಇಲ್ಲಿಯೇ ಬೆಳೆದುದು. 'ನೈಕೆ' ಎಂಬ ಮೆಸೊಪೊಟೇಮಿಯಾ ಸಂಶೋಧಕರು—ಈ ಜನರು ಸುಮೆರಿಯಾ ದೇಶದಿಂದ ಬಂದು ಇಲ್ಲಿ ನೆಲೆಸಿದರೆಂದು ಅಭಿಪ್ರಾಯಪಡುತ್ತಾರೆ. ಆದರೆ ಮಾರ್ಷಲ್‌ರವರ ಅಭಿಪ್ರಾಯದಲ್ಲಿ ಈ ನಾಗರಿಕತೆಯು ಇಜಿಪ್ತ ಮತ್ತು ಮೆಸೊಪೊಟೇಮಿಯಾ ನಾಗರಿಕತೆಗಳಿಗಿಂತ ತುಸು ಮೇಲಾದುದು.

"ಐದು ಸಾವಿರ ವರ್ಷಗಳ ಹಿಂದೆ, ಆರ್ಯರು ಕೂಡ ಕೇಳಬರದ ಪೂರ್ವದಲ್ಲಿ ಪಂಜಾಬ ಮತ್ತು ಸಿಂಧು ಈ ದೇಶಗಳು ಅತ್ಯುಚ್ಚವಾದ ನಾಗರಿಕತೆಯಲ್ಲಿ ನಲಿದಾಡುತ್ತಿದ್ದವು. ಆ ನಾಗರಿಕತೆಯು ಆ ಕಾಲದಲ್ಲಿಯೇ ಅಸ್ತಿತ್ವದಲ್ಲಿದ್ದ ಇಜಿಪ್ತ—ಮೆಸೊಪೊಟೇಮಿಯಾಗಳ ನಾಗರಿಕತೆಗೆ ತಂತೋತಂತವಾಗಿ ಸಂಬಂಧಿಸಿದ್ದು, ಕೆಲವು ಅಂಶಗಳಲ್ಲಿ ಅವಕ್ಕಿಂತಲೂ ಅತ್ಯಂತ ಶ್ರೇಷ್ಠವಾಗಿದ್ದಿತು. ಹರಪ್ಪ ಮತ್ತು ಮೊಹೆಂಜೊದಾರೊಗಳಲ್ಲಿಯ

ಸಂಶೋಧನಗಳು ಈಗ ಈ ವಿಷಯುವನ್ನು ನಿಸ್ಸಂದೇಹವಾಗಿ ಮುಂಡಿಸು ತ್ತವೆ.' (ಸರ್ ಜಾನ್ ಮಾರ್ಷಲ್—'ಸಿಂಧು-ಮೊಹೆಂಜೊದಾರೊ ನಾಗರಿಕತೆ')

ಇಲ್ಲಿ ದೊರೆತ ಅವಶೇಷಗಳ ಪರೀಕ್ಷೆಯಿಂದ ಈ ನಾಗರಿಕತೆಯು ಭಾರತೀಯವಾದುದೆಂದು ನಿಸ್ಸಂದೇಹವಾಗಿ ಹೇಳಬಹುದು. ಯಾಕಂದರೆ ಇಲ್ಲಿಯ ಮತೀಯ ಸಂಸ್ಕಾರಗಳು ಮತ್ತು ಕುಶಲ ವಿದ್ಯೆಗಳು ಬಹಳ ಮಟ್ಟಿಗೆ ದ್ರಾವಿಡರ ನಾಗರಿಕತೆಯಂತೆ ಇರುತ್ತವೆ. ಕೆಲವರು ಈ ನಾಗರಿಕತೆಯನ್ನು ದ್ರಾವಿಡರ ನಾಗರಿಕತೆಯೆಂದು ಅಭಿಪ್ರಾಯಪಟ್ಟಿ ದ್ದಾರೆ. ಇಲ್ಲಿ ದೊರೆತ ಅವಶೇಷಗಳನ್ನು ಸೂಕ್ಷ್ಮವಾಗಿ ತಿಳಿಯಲಾಗಿದೆ

ಮೊಹೆಂಜೊದಾರೊದಲ್ಲಿ ದೊರೆತಿರತಕ್ಕ ಕಟ್ಟಡಗಳು ಸುಟ್ಟ ಇಟ್ಟಂಗಿಯಿಂದ ಕಟ್ಟಲ್ಪಟ್ಟವುಗಳು. ಪುರಾತನ 'ಟ್ರಾಯ'ದಲ್ಲಿ ದೊರೆತ ೯ ನಗರಗಳಂತೆ ಇಲ್ಲಿ ಏಳು ನಗರಗಳು ದೊರೆತಿವೆ. ಚರಿತ್ರೆ ಗೊತ್ತಿಲ್ಲದ ಜನರ ಚರಿತ್ರೆಯು ಈಗ ಬೆಳಕಿಗೆ ಬಂದಿದೆ. ಈ ನಗರಗಳ ರಚನೆಯು ಅತಿ ಆಧುನಿಕವಾಗಿದೆ. ಈ ಕಟ್ಟಡಗಳಲ್ಲಿ ಕೋಣೆಗಳು, ಪ್ರತ್ಯೇಕ ಸ್ನಾನದ ಮನೆ, ಅಡಿಗೆಯ ಮನೆ–ಇವುಗಳಿವೆ. ಪ್ರತಿ ಮನೆಗೂ ಬಾವಿಯಿದೆ. ಇಂದಿಗೂ ಇವುಗಳಿಂದ ನೀರನ್ನು ಉಪಯೋಗಿಸಬಹುದು. ಸ್ನಾನದ ಮನೆಯ ಬಚ್ಚಲಿನಿಂದ ನೀರು ಚರಂಡಿಯ ದ್ವಾರವಾಗಿ ಸಾರ್ವಜನಿಕ ಚರಂಡಿಗೆ ಸೇರುವಂತಿತ್ತು. ಈ ಚರಂಡಿಗಳ ಮೇಲ್ಭಾಗವು ಮುಚ್ಚ ಲಾಗಿತ್ತು. ಈ ಮಾದರಿಯ ಕಟ್ಟಡಗಳು ಇಜಿಪ್ತಿನಲ್ಲಾಗಲಿ, ಮೆಸೊ ಪೊಟೇಮಿಯಾದಲ್ಲಾಗಲಿ ದೊರೆತಿಲ್ಲ. ತಮ್ಮ ಪಟ್ಟಣದ ನಿರ್ಮಲೀಕರಣದ ವ್ಯವಸ್ಥೆಯನ್ನು ಮೇಲ್ಕಂಡ ರೀತಿಯಲ್ಲಿ ಮಾಡಿಕೊಂಡಿದ್ದವರ ನಾಗರಿ ಕತೆಯು ಚಾರಿತ್ರಿಕ ದೃಷ್ಟಿಯಿಂದ ಪ್ರಾಚೀನ ಕಾಲಕ್ಕೆ ಸೇರಿದ್ದಾದರೂ ಆ ರೀತಿಯ ಬುದ್ಧಿ ಕುಶಲತೆಯು ಆಧುನಿಕ ಕಾಲದಲ್ಲಿ ತೋರುವಷ್ಟೇ ಪ್ರಗತಿ ಸೂಚಕವಾದುದೆಂದಲ್ಲಿ ಉತ್ಪ್ರೇಕ್ಷೆಯೆನಿಸದು. ಮೇಲ್ಕಂಡ ನಾಗರಿಕತೆಯು ಸಿಂಧು ದೇಶ, ಪಂಜಾಬ, ರಾಜಪುತ್ರಸ್ಥಾನ ಇಲ್ಲೆಲ್ಲ ವ್ಯಾಪಿಸಿರಬೇಕೆಂದು ಊಹಿಸಲಾಗಿದೆ.

ಹರಪ್ಪದಲ್ಲಿ ಶೋಧಿಸಿದ ನಗರಗಳು ಇನ್ನೂ ಹಳೆಯುವು. ಇಲ್ಲಿ ವಿಶೇಷವಾಗಿ ಚಾಕು, ಕೊಡಲಿ, ಉಳಿ, ಬರ್ಚಿ, ಮನೆ ಉಪಯೋಗದ ಸಾಮಾನುಗಳು, ಕೆತ್ತಿರುವ ಮುದ್ರೆಗಳು, ಬಂಗಾರದ ಒಡವೆಗಳು, ಈ ಮುಂತಾದವುಗಳು ದೊರೆತಿವೆ. ಇವುಗಳಿಂದ ಈ ಜನರು ವ್ಯಾಪಾರದಲ್ಲಿ ಪ್ರವೀಣರಾಗಿದ್ದರೆಂದು ತಿಳಿದು ಬರುತ್ತದೆ. ಒಂಟೆ, ಬೆಕ್ಕು, ನಾಯಿ ಗಳನ್ನು ಇವರು ಸಾಕಿಕೊಂಡಿದ್ದರೆಂದು ಗೊತ್ತಾಗುತ್ತದೆ.

ಸಂಕ್ಷಿಪ್ತದಲ್ಲಿ, ಈ ಜನರು ನಾಗರಿಕರಾಗಿ ಒಡವೆಗಳ ಉಪಯೋಗ ವನ್ನೂ ಬಟ್ಟೆಗಳ ಉಪಯೋಗವನ್ನೂ ಅರಿತವರಾಗಿದ್ದರು. ಇವರು ಅದ್ಭುತ ಶಕ್ತಿಗಳನ್ನೂ ಹಾವನ್ನೂ ಪೂಜಿಸುತ್ತಿದ್ದರು. ಇವರ ಮತವು ದ್ರಾವಿಡರ ಮತವನ್ನು ಹೋಲುತ್ತದೆ. ಸಿಂಧೂ ನದಿಯ ತೀರದಲ್ಲಿ ದೊರೆತ ಅವಶೇಷಗಳಲ್ಲಿ ಮತಕ್ಕೆ ಸಂಬಂಧಪಟ್ಟ ವಸ್ತುಗಳು ಮನೋರಂಜಕ ವಾದವುಗಳೆಂದು ಸುಪ್ರಸಿದ್ಧ ಇತಿಹಾಸ ವಿದ್ವಾಂಸರಾದ ಡಾ. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ಯರವರು ಅಭಿಪ್ರಾಯಪಡುತ್ತಾರೆ. ಅಲ್ಲಿ ಸಣ್ಣ ಸಣ್ಣ ಹೆಣ್ಣು ಪ್ರತಿಮೆಗಳೂ ಅಲಂಕಾರಗಳಿದ್ದ, ಕಾಲಿಲ್ಲದ ವಿಗ್ರಹ ಗಳೂ ಅನೇಕ ದೊರೆತಿವೆ. ಇವು ಪ್ರಾಯಶಃ ಆ ಜನರು ಮಾತೃ ದೇವತೆ ಯೆಂದು ಪೂಜಿಸುತ್ತಿದ್ದ ಪ್ರತಿಮೆಗಳಾಗಿರಬೇಕೆಂದು ಅಭಿಪ್ರಾಯ ಪಡ ಲಾಗಿದೆ.

ಮೇಲೆ ವಿವರಿಸಿದ ನಾಗರಿಕತೆಯು ಪ್ರಾಚೀನ ಭಾರತದ ಕೀರ್ತಿ ಯನ್ನು ಪ್ರಜ್ವಲಿಸಿದೆ. ವಿಶ್ವದ ನಾಗರಿಕತೆಯಲ್ಲಿ ಭಾರತದ ಪ್ರಾಶಸ್ತ್ಯ ವನ್ನು ತಂದು ಕೊಟ್ಟಿದೆ. ಅವರು ನೂತನ ಶಿಲಾಯುಗ, ತಾಮ್ರಯುಗ, ಮತ್ತು ಸ್ವರ್ಣಯುಗದ ನಾಗರಿಕತೆಯನ್ನು ಬಲ್ಲವರಾಗಿ ಶಾಂತಿಯಿಂದ ಜೀವನ ನಡೆಸುತ್ತ ಸಂಸ್ಕೃತಿಯನ್ನು ಬೆಳೆಸಿದರು. ಇವೆಲ್ಲವುಗಳ ಸಮಾ ಲೋಚನೆಯಿಂದ ಭಾರತೀಯರ ನಾಗರಿಕತೆಯು ಸುಮಾರು ಕ್ರಿ. ಪೂ. ೩೦೦೦ದಲ್ಲಿ ಪೂರ್ಣತೆಯನ್ನು ಪಡೆದಿತ್ತೆಂದು ಹೇಳಲು ಆಧಾರವಾಗಿದೆ.

## ೧೫ ಇಂಡೋನೇಷಿಯಾ

(ಗ್ರೇಟರ ಇಂಡಿಯಾ)—ಭಾರತದಲ್ಲಿ ವೃದ್ಧಿಗೊಂಡ ನಾಗರಿಕತೆಯು ಚೀಣಾ, ಟಿಬೇಟ್, ಕೋರಿಯಾ, ಜಪಾನ, ಬರ್ಮ್ಮಾ, ಸಯಾಂ, ಕಾಂಬೋಡಿಯಾ, ಸಿಂಹಳದ್ವೀಪ ಇವುಗಳಲ್ಲಲ್ಲದೆ ಸುಮಾತ್ರಾ, ಜಾವಾ, ಬಲಿ ದ್ವೀಪಗಳಲ್ಲೂ ವ್ಯಾಪಿಸಿತ್ತು. ಕ್ರಿ. ಶ. ೩ನೆಯ ಶತಮಾನದಿಂದಲೇ ಪ್ರಾಯಶಃ ಭಾರತೀಯರು ಆ ದ್ವೀಪಗಳಲ್ಲಿ ನೆಲೆಸಲು ಉಪಕ್ರಮಿಸಿರಬೇಕೆಂದು ನಂಬಲಾಗಿದೆ. ಜಾವಾ ಮತ್ತು ಬಲಿ ದ್ವೀಪಗಳಲ್ಲಿ ದೊರೆತಿರುವ ಸಾಹಿತ್ಯಾವಲೋಕನದಿಂದಲೂ ಕಲಾವಸ್ತುಗಳ ಪರೀಕ್ಷೆಯಿಂದಲೂ ಬಹಳ ಕಾಲದಿಂದಲೂ ಭಾರತಕ್ಕೂ ಮತ್ತು ಈ ದ್ವೀಪಾಂತರ ವಾಸಿಗಳಿಗೂ ಸಂಪರ್ಕವಿತ್ತೆಂದು ಸ್ಪಷ್ಟವಾಗುತ್ತದೆ. ರಾಮಾಯಣ ಮತ್ತು ಮಹಾಭಾರತದ ಸನ್ನಿವೇಶಗಳನ್ನು ಇಲ್ಲಿಯ ಸಂಸ್ಕೃತಿಯಲ್ಲಿ ನೋಡಬಹುದಾಗಿದೆ. ಅಷ್ಟು ಪ್ರಾಚೀನ ಕಾಲದಲ್ಲಿಯೇ ಭಾರತೀಯರು ಸಮುದ್ರದ ಮೇಲೆ ವ್ಯಾಪಾರ ಮಾಡುತ್ತಿದ್ದರು.

ಬೋರೋಬೊದೂರಿನಲ್ಲಿರತಕ್ಕ ಅದ್ಭುತ ಕಟ್ಟಡವು ಭಾರತದ ಸಂಸ್ಕೃತಿಯ ಕಲಾವೈಚಿತ್ರ್ಯವನ್ನು ಪ್ರತಿಬಿಂಬಿಸುತ್ತದೆ. ಈ ದ್ವೀಪಾಂತರಗಳ ನಾಗರಿಕತೆಯನ್ನು ಡಾ. ಕಾಳಿದಾಸ್‌ನಾಗ್ ಮುಂತಾದವರು ವಿಶದವಾಗಿ ಬರೆದಿರುತ್ತಾರೆ. ಆಧುನಿಕ ರಾಜಕೀಯ ದೃಷ್ಟಿಯಲ್ಲಿ ಇಂಡೋನೇಷಿಯನ್ನರೂ ಡಚ್ಚರ ದಾಸ್ಯದಿಂದ ಪಾರಾಗಲು ಸ್ವಾತಂತ್ರ್ಯ ಚಳವಳಿಯನ್ನು ಹೂಡಿದ್ದಾರೆ.

## ೧೬ ಭಾರತೀಯರ ನಾಗರಿಕತೆಯ ವ್ಯಾಪ್ತಿ

ಹಿಂದಿನ ಕೆಲವು ಅಧ್ಯಾಯಗಳಲ್ಲಿ ಏಷ್ಯಾಖಂಡದ ಕೆಲವು ಜನಾಂಗಗಳ ನಾಗರಿಕತೆಯ ಬೆಳವಣಿಗೆ, ಅಂತಸ್ತು, ವ್ಯಾಪ್ತಿಯನ್ನು ಸೂಕ್ಷ್ಮವಾಗಿ ವಿವರಿಸಲಾಗಿದೆ. ಅಲ್ಲಲ್ಲಿ ಸ್ಪಷ್ಟಪಡಿಸಿರುವಂತೆ ಆರ್ಯರ ಸಂತತಿಗೆ ಸೇರಿದ ಮೂಲ ಪುರುಷರು ಗುಂಪುಗುಂಪಾಗಿ ತಮಗೂ ತಮ್ಮ ಪಶುಗಳಿಗೂ ಆಹಾರ ವಸತಿಗಳಿಗಾಗಿ ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸಲುಪಕ್ರಮಿಸಿದರು. ಕಾಲಕ್ರಮೇಣ ಅವರು ಮಹಾನದಿಗಳ ತೀರ ಪ್ರದೇಶಗಳಲ್ಲಿ ಶಾಶ್ವತವಾಗಿ ನೆಲೆಸಲು ಆರಂಭಿಸಿದರು. ಈ ಸಂತತಿಯ ಜನರು ಯುರೋಪಿನಲ್ಲಿಯೂ ಏಷ್ಯಾಖಂಡದ ಮೆಸೊಪೊಟೆಮಿಯಾದಲ್ಲಿಯೂ ಇರಾಣಿನಲ್ಲೂ, ಹಿಂದುಸ್ಥಾನದಲ್ಲಿಯೂ ನೆಲೆಸಿ ಜೀವನವನ್ನು ಸುಗಮವಾಗಿ ನಡೆಸಿಕೊಂಡು ಹೋಗಲು ಅನುಕೂಲಿಸುವಂತೆ ಜೀವನದ ಸಲಕರಣೆಗಳನ್ನು ಮಾಡಿಕೊಳ್ಳುವದನ್ನು ಕಲಿತರು. ಶಾಶ್ವತ ನೆಲೆ ಸಿಕ್ಕಿದುದರ ಪರಿಣಾಮವಾಗಿ ಅವರ ಬುದ್ಧಿಯು ಮಹತ್ತರವಾಗಿ ವಿಕಾಸಗೊಂಡಿತು. ವ್ಯವಸಾಯವೇ ಮುಖ್ಯವೃತ್ತಿಯಾದ ಕಾರಣ ವಿಶೇಷ ವಿರಾಮ ಸಿಗಲು ಅವಕಾಶವಾಯಿತು.

ಈ ರೀತಿಯಾಗಿ ನಾಗರಿತೆಯನ್ನು ಅತ್ಯುನ್ನತ ಸ್ಥಿತಿಗೆ ಬೆಳೆಸಿದವರೇ ಹಿಂದುಸ್ಥಾನದಲ್ಲಿ ನೆಲೆಸಿದವರು. ಸಿಂಧೂ ನದಿಯ ತೀರದಲ್ಲಿ ನೆಲೆಸಿದ ಆರ್ಯರೇ ಇವರು. ಇವರು ಆರ್ಯರೆಂದು ಬಹುಮತವಿದ್ದರೂ, ಕೆಲವರು, ಸಿಂಧೂ ನದಿಯ ತೀರದಲ್ಲಿ ನೆಲೆಸಿ, ಹರಪ್ಪ ಮತ್ತು ಮೋಹೆಂಜೊದಾರೊ ನಾಗರಿಕತೆಯನ್ನು ಪೋಷಿಸಿದವರು ದ್ರಾವಿಡರೆಂದೂ ಮತ್ತು ಅವರ ನಾಗರಿಕತೆಯೇ ಪ್ರಾಚೀನವೆಂದೂ ಅಭಿಪ್ರಾಯಪಟ್ಟಿದ್ದಾರೆ. ಈ ವಿಚಾರದಲ್ಲಿ ಭಿನ್ನಾಭಿಪ್ರಾಯವಿರುವ ಕಾರಣ, ಅತಿ ಪ್ರಾಚೀನ ಕಾಲದಲ್ಲಿಯೇ ದೂರ ದೇಶಗಳಲ್ಲಿ ವ್ಯಾಪಿಸಿತ್ತೆಂದು ತಿಳಿಯಲು ದೊರೆತಿರುವ ಆಧಾರಗಳಿರುವ ನಾಗರಿಕತೆಯ ಸ್ವರೂಪಕ್ಕೇ

ಗಮನಕೊಡುವದು ಸಾಧುವೆಂದು ಕಾಣಬರುತ್ತದೆ. ಆದ ಕಾರಣ ಅದರ ಸಾರಸರ್ವಸ್ವವನ್ನು ಭಾರತೀಯ ಸಂಸ್ಕೃತಿಯೆಂದು ನಿಶ್ಚಯಿಸುವದು ಸೂಕ್ತವೆಂದು ತೋರಿಬರುತ್ತದೆ. ಇನ್ನು ಮುಂದೆ ಭಾರತೀಯ ಸಂಸ್ಕೃತಿಯ ವ್ಯಾಪ್ತಿಯನ್ನು ಮತ್ತು ವೈಶಿಷ್ಟ್ಯವನ್ನು ಸೂಕ್ಷ್ಮವಾಗಿ ವಿಚಾರ ಮಾಡಲಾಗಿದೆ.

ಭಾರತೀಯ ಸಂಸ್ಕೃತಿಯು ಇಂದು ವಿಶ್ವವ್ಯಾಪಕವಾಗಿದೆ. ಅದು ಪ್ರಪಂಚದ ನಾನಾ ಜನಾಂಗಗಳ ಮೆಚ್ಚುಗೆಗೆ ಪಾತ್ರವಾಗಿದೆ. ಅನುಕರಣೆಗೂ ಆಚರಣೆಗೂ ಯೋಗ್ಯವಾಗಿದೆ. ಪಾಶ್ಚಾತ್ಯ ನಾಗರಿಕತೆಯ ಸಂಪರ್ಕದಿಂದ ಜನತೆಯ ಜೀವನದಲ್ಲಿ ಆಡಂಬರವು ಹೆಚ್ಚಿತೇ ಹೊರತು, ಅದರ ಸಂಸ್ಕೃತಿಯ ಮೂಲ ತತ್ವಗಳು ಎಳ್ಳಷ್ಟೂ ಬದಲಾಗಲಿಲ್ಲ. ಇಲ್ಲಿಯ ವೇದಾಂತ ತತ್ವಗಳು, ಲಲಿತ ಕಲೆಗಳು, ಸಾಹಿತ್ಯ ಸ್ವರೂಪ ಮತ್ತು ಜೀವನದ ಉದಾತ್ತ ಧ್ಯೇಯಗಳು, ಪ್ರಪಂಚಕ್ಕೆ ಬೋಧಪ್ರದವಾಗಿವೆ. ಇಂದಿಗೆ ಇಲ್ಲಿಯ ತತ್ವಗಳು ವಿಶಾಲ ಜಗತ್ತಿನ ಕಲ್ಯಾಣವನ್ನೇ ಬೋಧಿಸುವಂಥವಾಗಿವೆ. ಇದು ಭಾರತ ನಾಗರಿಕತೆಯ ಪ್ರಭಾವಕ್ಕೆ ಸಂಬಂಧಿಸಿದ ಅಂಶ. ಇದಕ್ಕೂ ಪೂರ್ವಭಾವಿಯಾಗಿ ಭಾರತದ ಮುಖ್ಯ ನೆಲೆವೀಡಿನಲ್ಲಿ ಯಾವ ತರದ ಸಂಸ್ಕೃತಿಯು ಬೆಳೆಯಿತು ಮತ್ತು ಆ ಸಂಸ್ಕೃತಿಯ ವಿವಿಧ ಭಾಗಗಳು ಇತರ ದೇಶಗಳಲ್ಲಿ ಹೇಗೆ ಹರಡಿದವು; ಎಂಬ ಅಂಶವನ್ನು ವಿಚಾರ ಮಾಡುವದು ಅನುಚಿತವಾಗಲಾರದು.

ಭಾರತ ಭೂಮಿಯಲ್ಲಿ ಅತಿ ಪ್ರಾಚೀನವಾದ ಸಂಸ್ಕೃತಿಯೆಂದರೆ ವೇದಗಳಲ್ಲಿ ಗೋಚರವಾಗುವ ಸಂಸ್ಕೃತಿಯು. ಅಲ್ಲಿಂದೀಚೆಗೆ ಬೌದ್ಧ, ಜೈನ, ಮೌರ್ಯ, ಗುಪ್ತ ಇವರ ಕಾಲದ ಸಂಸ್ಕೃತಿಗಳು ಬಂದವು. ಅಲ್ಲದೆ ವಾಕಾಟಕರು, ಆಂಧ್ರರು ಭಾರಶೈವನಾಗರು, ಶಾತವಾಹನರು ಕದಂಬರು, ಚೋಳರು, ಪಲ್ಲವರು ಗಂಗರು, ಚಾಳುಕ್ಯರು, ಹೊಯ್ಸಳರು, ರಾಷ್ಟ್ರಕೂಟರು, ಚೇರರು, ಪಾಂಡ್ಯರು ಮೊದಲಾದ ವಂಶದ ರಾಜರು ರಾಜ್ಯಕಟ್ಟಿ ಹಿಂದೂ ಸಂಸ್ಕೃತಿಯನ್ನು ಉತ್ತರದಲ್ಲಿಯೂ ಮತ್ತು ದಕ್ಷಿಣದಲ್ಲಿಯೂ ಅಭಿವೃದ್ಧಿಗೊಳಿಸಿದರು. ಇವೆಲ್ಲವನ್ನು ವಿಮರ್ಶಿಸುವದು ಬಹಳ

ಹಿಂದಿನ ಕಾಲದ ನಾಗರಿಕತೆಗೆ ಸಂಬಂಧಿಸುವದಿಲ್ಲ. ಅವುಗಳಲ್ಲಿ ಕ್ರಿ. ಪೂ. ಕ್ಕೆ ಸೇರಿದ ಮತ್ತು ಕ್ರಿ. ಶ. ಆರಂಭದ ಕೆಲವು ಕಾಲದ ಚರಿತ್ರೆಗಳು ಮಾತ್ರ ಮುಖ್ಯ. ಅದಕಾರಣ ಯಾವ ನಾಗರಿಕತೆಯು, ಸಂಸ್ಕೃತಿಯು ಭಾರತದಲ್ಲಿ ಬೆಳೆದು, ದೇದೀಪ್ಯಮಾನವಾಗಿ ದೇಶವಿದೇಶಗಳಲ್ಲಿ ದ್ವೀಪಾಂತರಗಳಲ್ಲಿಯೂ ವ್ಯಾಪಿಸಿ, ಖ್ಯಾತಿಯನ್ನು ಗಳಿಸಿತೋ, ಅಂತಹ ಸಂಸ್ಕೃತಿಯ ಪ್ರಭಾವವನ್ನೇ ಇಲ್ಲಿ ಹೆಚ್ಚು ಚರ್ಚಿಸಲಾಗಿದೆ.

ಬೌದ್ಧ ಮತ್ತು ಜೈನ ಮತಗಳು ರಾಜಮನೆತನದಲ್ಲಿ ಹುಟ್ಟಿ ರಾಜ್ಯವಾಳಲು ಅವಕಾಶವಿದ್ದ ಗೌತಮಬುದ್ಧ ಮತ್ತು ಮಹಾವೀರ ಇವರುಗಳಿಂದ ಸ್ಥಾಪಿತವಾದವು. ಬೌದ್ಧಮತವು ಪ್ರಚುರಗೊಂಡಂತೆ ಜೈನಮತವು ಪ್ರಚುರಗೊಳ್ಳಲಿಲ್ಲ. ಬೌದ್ಧಮತವನ್ನು ಅಶೋಕ, ಶ್ರೀಹರ್ಷ, ಕನಿಷ್ಕ ಮುಂತಾದ ರಾಜರು ಪ್ರೋತ್ಸಾಹಕೊಟ್ಟು ತಾವೇ ಅದನ್ನು ಅವಲಂಬಿಸಿದರು. ಅದು ಕಾರಣವೇ ಅದು ಹೆಚ್ಚು ಜನಾಕರ್ಷಣೀಯವಾಯಿತು. ರಾಜಧರ್ಮವೂ ರಾಷ್ಟ್ರಧರ್ಮವೂ ಒಂದೇ ಆಯಿತು. ಇಷ್ಟೇ ಅಲ್ಲ; ಈ ಮತವನ್ನು ಪ್ರಚುರಗೊಳಿಸಲು ಚೀನ, ಬರ್ಮಾ, ಸಯಾಂ, ಸಿಂಹಳ ದ್ವೀಪ ಮುಂತಾದ ದೂರದೇಶಗಳ ಕಡೆಗೆ ರಾಯಭಾರಿಗಳನ್ನು ಕಳಿಸಲಾಯಿತು. ಬೇರೆ ದೇಶಗಳಿಂದಲೂ ಈ ದೇಶಕ್ಕೆ ಯಾತ್ರಿಕರು ಬರುತ್ತಿದ್ದರು ಜೈನಧರ್ಮವು ಈ ದೇಶದಲ್ಲಿಯೇ ಚೆನ್ನಾಗಿ ಪ್ರಚಾರಕ್ಕೆ ಬಂದಿತು. ಅನೇಕರು ಅದನ್ನು ಅವಲಂಬಿಸಿದರು. ಆ ಮತಾನುಯಾಯಿಗಳು ಇಂದಿಗೂ ದಿಗಂಬರ, ಶ್ವೇತಾಂಬರರೆಂಬ ಎರಡು ಪಂಗಡದವರಾಗಿದ್ದಾರೆ.

ಮೇಲಿನ ಮತಗಳಲ್ಲಿ ಬೌದ್ಧಮತವು ದೂರ ದೇಶಗಳಲ್ಲಿ ಹರಡುವ ಮುಂಚೆಯೇ ವೇದಕಾಲದ ಸಂಸ್ಕೃತಿಯು ದೂರ ದೇಶಗಳಲ್ಲಿ ಹರಡಿತ್ತು. ಆದಕಾರಣ ಅದನ್ನು ವಿಚಾರಮಾಡಲಾಗಿದೆ

ಏಷ್ಯಾಖಂಡದ ವಿವಿಧ ಭಾಗಗಳಲ್ಲಿ ನೆಲೆಸಿರತಕ್ಕ ಜನಾಂಗಗಳ ಸಂಸ್ಕೃತಿಯಲ್ಲಿ ಭಾರತೀಯ ಸಂಸ್ಕೃತಿಯ ಪ್ರಭಾವವು ಬಹಳ ಮಟ್ಟಿಗೆ ಕಾಣಬರುತ್ತದೆ. ಕೆಲವು ಸಂದರ್ಭಗಳಲ್ಲಿ ಅದನ್ನೇ ತಳಹದಿಯಾಗಿ ಇಟ್ಟು

ಕೊಂಡು ಎಷ್ಟೋ ಜನಾಂಗಗಳು ಮುಂದುವರಿದಿವೆ. ಇತ್ತೀಚೀನ ಸಂಶೋಧನೆಗಳಲ್ಲಿ ಬೋಘಸ್ಕಾಯದಲ್ಲಿ ದೊರೆತ ಶಾಸನದಿಂದ ಕ್ರಿ. ಪೂ. ೧೪೦೦ರಲ್ಲಿ ಯುದ್ಧಮಾಡುತ್ತಿದ್ದ ಹಿಟೈಟ್ ಮತ್ತು ಮಿರಾನಿ ಪಂಗಡದವರಿಗೆ ಆದ ಒಪ್ಪಂದದಲ್ಲಿ ಮಿತ್ರ, ವರುಣ, ಇಂದ್ರ, ನಾಸತ್ಯೌ ಇತ್ಯಾದಿ ದೇವತೆಗಳನ್ನು ಪ್ರಾರ್ಥಿಸಿಕೊಂಡಿರುವ ಅಂಶಗಳು ತಿಳಿದುಬಂದಿವೆ. ಈ ಶಾಸನದ ಭಾಷೆಯು ಸಂಸ್ಕೃತಕ್ಕೆ ಬಹುಮಟ್ಟಿಗೆ ಹೋಲುತ್ತದೆ. ಇದಲ್ಲದೆ ಭಾರತ ಸಂಸ್ಕೃತಿಯು ಮೆಸೊಪೊಟೆಮಿಯಾ ಪ್ರದೇಶದಲ್ಲಿ ಯುಫ್ರೆಟಿಸ್ ನದಿಯ ಮೇಲ್ಭಾಗದ ಕಣಿವೆಯ ವರೆಗೆ ವ್ಯಾಪಿಸಿತ್ತೆಂದೂ ಮತ್ತು ಅರೇಬಿಯಾದಲ್ಲಿ ಕೂಡ ಇಸ್ಲಾಮು ಮತವು ರೂಢಿಯಲ್ಲಿ ಬರುವ ಪೂರ್ವದಲ್ಲಿ ಬ್ರಾಹ್ಮಣರು ವಾಸಿಸುತ್ತಿದ್ದರೆಂದೂ ಅವರು ಶಿವನನ್ನು ಮಕ್ಕೇಶನೆಂದು ಆರಾಧಿಸುತ್ತಿದ್ದ ರೆಂಗೂ ತಿಳಿದು ಬಂದಿರುತ್ತದೆ. ಪ್ರಸಿದ್ಧ ಖಗೋಳಶಾಸ್ತ್ರಜ್ಞನಾದ ಯವನಾಚಾರ್ಯನು ಬ್ರಾಹ್ಮಣವಂಶದಲ್ಲಿ ಹುಟ್ಟಿದವನೆಂತಲೂ ಮತ್ತು ಅಲ್ಲಿಯ ಬ್ರಾಹ್ಮಣರಿಂದಲೇ ಅರಬ್ಬಿಯವರು ಗಣಿತಶಾಸ್ತ್ರ ಮತ್ತು ಖಗೋಳ ಶಾಸ್ತ್ರ ಇವುಗಳನ್ನು ಕಲಿತು ಭಾರತದಲ್ಲಿ. ಮೊದಲು ಪ್ರಚಾರಕ್ಕೆ ತಂದ ರೆಂದೂ ಈ ಮೊದಲೇ ವಿಶದಪಡಿಸಿದೆ.

ಗೋಬಿ ಮರುಭೂಮಿಯನ್ನು ಅಗಿದು ತೆಗೆದಿರುವ ಅವಶೇಷಗಳಲ್ಲಿ ದೊರೆತಿರುವ ಪಾಳು ನಗರಗಳನ್ನು ಪರೀಕ್ಷಿಸಿದಲ್ಲಿ, ಅಲ್ಲಿ ಸುಮಾರು ೨೦೦೦ ವರುಷಗಳ ಹಿಂದೆ ಭಾರತೀಯರು ವಾಸಿಸುತ್ತಿದ್ದರೆಂದು ಅಭಿಪ್ರಾಯಪಡ ಲಾಗಿದೆ. ಇಲ್ಲಿ ದೊರೆತಿರತಕ್ಕ ಅವಶೇಷಗಳಲ್ಲಿಯ ಕಾಗದ ಪತ್ರಗಳು ಭಾರತದಲ್ಲಿ ಕ್ರಿ. ಶ. ಒಂದನೆಯ ಶತಮಾನದಲ್ಲಿ ಬಳಕೆಯಲ್ಲಿದ್ದ ಅಕ್ಷರು ಗಳಾಗಿವೆ. ನಾಣ್ಯಗಳೂ ಪುರಾಣಗಳೂ ದೇವರ ಪ್ರತಿಮೆಗಳೂ ಭಾರತ ದಲ್ಲಿದ್ದಂತಹವೇ ಆಗಿವೆ. ಇಲ್ಲಿಯ ಶಿಲ್ಪಕಲೆಯು ಬುದ್ಧನ ಕಾಲಕ್ಕೆ ಸಂಬಂಧಿಸುತ್ತದೆ. ಆ ಕಾಲದಲ್ಲಿ ಭಾರತದ ವಾಯುವ್ಯದಲ್ಲಿಯೂ ಮಧ್ಯ ಏಷ್ಯಾದಲ್ಲಿಯೂ ಬಳಕೆಯಲ್ಲಿದ್ದ ಖರೋಷ್ಟಿ ಲಿಪಿಯಲ್ಲಿ ಸುಮಾರು ಕ್ರಿ. ಶ. ೨ನೆಯ ಶತಮಾನದಲ್ಲಿ ಧಮ್ಮಪದದ ಶೈಲಿಯಲ್ಲಿ ಬರೆದ ಪ್ರತಿಯು ದೊರೆತಿದೆ. ಮಿರಾನಿನಲ್ಲಿ ದೊರೆತ ಪಾಳುದೇವಾಲಯದಲ್ಲಿ ಬೌದ್ಧ ಜಾತಕ

ಕಥೆಗಳು ಶಾಸನ ರೂಪದಲ್ಲಿ ದೊರೆತಿವೆ. ಇದಲ್ಲದೆ ಚೀನ, ತುರ್ಕಸ್ಥಾನ ಗಳಲ್ಲಿಯೂ ಆರ್ಯರು ವಾಸಿಸುತ್ತಿದ್ದರೆಂದು ಡಾ. ಸಿಲ್ವನ್ ಲೆವಿಯುವರು ಸಮರ್ಥಿಸಿದ್ದಾರೆ. ಮೇಲೆ ವಿವರಿಸಿದಂತೆ ಬೌದ್ಧಮತವು ಭಾರತ ಸಂಸ್ಕೃತಿಯನ್ನು ದೂರ ದೇಶಗಳಲ್ಲಿ ಹರಡಲು ಸಹಕಾರಿಯಾಯಿತು. ಬೌದ್ಧಧರ್ಮವು ಹಿಂದೂ ಧರ್ಮದಿಂದ ಪ್ರತ್ಯೇಕವಾಗಲಿಲ್ಲ. ಹಿಂದೂ ಪುರಾಣೇತಿಹಾಸಗಳನ್ನೇ ಕಥಾವಸ್ತುವಾಗಿ ತೆಗೆದುಕೊಂಡು ತನ್ಮೂಲಕ ಬೌದ್ಧಮತವನ್ನು ಪ್ರಚುರಗೊಳಿಸಿದೆ. ಬುದ್ಧನು ವಿಗ್ರಹ ರೂಪದಲ್ಲಿ ದೇವರೆಂದು ಆರಾಧಿಸಲ್ಪಟ್ಟನು. ಇಂದಿಗೂ ಬುದ್ಧನು ದೇವರ ಅವತಾರ ವೆಂದೇ ಹಿಂದುಗಳ ನಂಬಿಕೆ ಹಿಂದೂ ಮತವನ್ನು ಉತ್ತಮಗೊಳಿಸಿದ ಬೌದ್ಧಮತವು ಭಾರತ ಸಂಸ್ಕೃತಿಯನ್ನೇ ಪ್ರಚುರಪಡಿಸಿತೆಂದಲ್ಲಿ ತಪ್ಪಾಗದು. ಬೌದ್ಧಮತವು ಭಾರತದಲ್ಲಿ ಹುಟ್ಟಿದುದಾದರೂ ವಿಶ್ವಕ್ಕೆ ಸೇರಿದ್ದಾಯಿತು ಇದು ಭಾರತ ಸಂಸ್ಕೃತಿಯನ್ನು ಇತರ ಮತ ತತ್ವಗಳಂತೆ ಪುಷ್ಟಿಗೊಳಿಸಿದರೂ ವಿಶಾಲ ದೃಷ್ಟಿಯಿಂದ ಇದನ್ನು ಭಾರತ ಸಂಸ್ಕೃತಿ ಯೆಂದೇ ತಿಳಿಯಲಾಗಿದೆ. ವಿಶ್ವಕ್ಕೆ ಹಿರಿದಾದ ಸಂಸ್ಕೃತಿಯೆಂದು ಮಾನ್ಯತೆ ಯನ್ನು ಪಡೆದಿದೆ.

ಬೌದ್ಧಮತವು ಚೀಣಾ, ಕೋರಿಯಾ, ಜಪಾನ, ಟಿಬೇಟ್, ಸಿಲೋನ, ಬರ್ಮಾ, ಕಾಂಬೋಡಿಯಾ ಈ ದೇಶಗಳಲ್ಲಿ ಮಾತ್ರವಲ್ಲದೆ ಸುಮಾತ್ರಾ, ಜಾವಾ, ಮಲಯ ಪರ್ಯಾಯದ್ವೀಪ, ಪಾಲಿನೇಷಿಯಾ ಮುಂತಾದ ದ್ವೀಪ ಸ್ತೋಮಗಳಲ್ಲಿಯೂ ಹರಡಿತ್ತು. ಕೆಲವು ಕಡೆಗೆ ಬೌದ್ಧಮತದ ಜತೆಗೆ ಹಿಂದೂಮತದ ಪದ್ಧತಿಗಳೂ ಹರಡಿದ್ದವು.

ಅಶೋಕ ಚಕ್ರವರ್ತಿಯು ಬೌದ್ಧಮತದ ಪ್ರಸಾರಕ್ಕೆ ಕೊಟ್ಟ ಪ್ರೋತ್ಸಾಹವನ್ನು ಈ ಮೊದಲೇ ವಿವರಿಸಲಾಗಿದೆ. ಚೀನ ದೇಶದ ಯಾತ್ರಿಕರು ಈ ದೇಶದಲ್ಲಿ ಸಂಚರಿಸಿ ತ್ರಿಪಿಟಕಗಳನ್ನು ಸಂಗ್ರಹಿಸಿದರು. ಚೀನ ದೇಶದಲ್ಲಿ ಬೌದ್ಧಮತಕ್ಕೆ ಸಂಬಂಧಿಸಿದ ಸಾವಿರಾರು ಗ್ರಂಥಗಳು ದೊರೆತಿವೆ. ಚೀಣೀಯರ ಸಾಹಿತ್ಯವೂ ಕಲೆಯೂ ವಾಸ್ತುಶಿಲ್ಪವೂ ಭಾರತದ ಬೌದ್ಧ ಸಂಪರ್ಕದ ಪ್ರಭಾವದಿಂದ ಕೂಡಿದೆ. ಸಂಕ್ಷಿಪ್ತದಲ್ಲಿ

ಚೀಣೀಯರ ಧಾರ್ಮಿಕ, ನೈತಿಕ ಮತ್ತು ಸಾಮಾಜಿಕ ಜೀವನದ ಮೇಲೆ ಭಾರತ ಸಂಸ್ಕೃತಿಯು ಪ್ರಭಾವಕಾರಿಯಾಗಿದೆ.

ಚೀನದಿಂದ ಬೌದ್ಧಮತವು ಕೋರಿಯಾದಲ್ಲಿ ಪ್ರಚಾರಕ್ಕೆ ಬಂದಿತು. ಇಂದಿಗೂ ಅಲ್ಲಿಯ ಶಿಲ್ಪಕಲೆಯು ಭಾರತ ಸಂಸ್ಕೃತಿಯ ಗುರುತನ್ನು ಸೂಚಿಸುತ್ತದೆ.

ಬಹಳ ಕಾಲದ ವರೆಗೆ ದೂರ ಪೂರ್ವಕ್ಕಿರುವ (ಶಾಂತಿಸಾಗರದಲ್ಲಿಯ) ಜಪಾನ ದ್ವೀಪಸ್ತೋಮಗಳಲ್ಲಿ ಬೌದ್ಧಮತವು ಹರಡಿರಲಿಲ್ಲ. ಸುಮಾರು ಕ್ರಿ. ಶ. ೫೩೮ರಲ್ಲಿ ಬೌದ್ಧಮತವು ಕೋರಿಯಾದಿಂದ ಜಪಾನಿನಲ್ಲಿ ಹರಡಿತೆಂದು ತಿಳಿದುಬಂದಿದೆ ಇಂದಿಗೂ ಜಪಾನಿನಲ್ಲಿ ಬೌದ್ಧ ಮತವು ಪ್ರಚಾರದಲ್ಲಿದೆ. ಅಲ್ಲಿಯ ದೊರೆಯೂ ಅದೇ ಮತಕ್ಕೆ ಸೇರಿದವನು. ಆಧುನಿಕ ಬೌದ್ಧಮತವನ್ನು ಪಿಂಟೋಯಿಝುಮ್ ಎಂದು ಕರೆಯುತ್ತಾರೆ. ಭಾರತದಲ್ಲಿ ಗುಪ್ತರ ಕಾಲದಲ್ಲಿದ್ದ ಕಲೆಯೂ ದೇವರ ವಿಗ್ರಹಗಳೂ ಅಲ್ಲಿ ದೊರೆತಿವೆ.

ಇದಲ್ಲದೆ ಬೌದ್ಧಮತವು ಟಿಬೇಟನಲ್ಲಿಯೂ ಪ್ರಚಾರದಲ್ಲಿತ್ತು. ನೇಪಾಳದಲ್ಲಿಯೂ ಹಿಂದೂ ಧರ್ಮವು ಆಚರಣೆಯಲ್ಲಿತ್ತು.

ಅಶೋಕ ಚಕ್ರವರ್ತಿಯು ತನ್ನ ತಮ್ಮನಾದ ಮಹೇಂದ್ರನನ್ನು ಸಿಂಹಳ ದ್ವೀಪಕ್ಕೆ ಬೌದ್ಧಮತವನ್ನು ಪ್ರಚಾರ ಮಾಡಲು ಕಳುಹಿದ್ದನೆಂದು ತಿಳಿದುಬಂದಿದೆ. ಆನಂತರ ಬುದ್ಧಘೋಷನು ಕೂಡ ಅಲ್ಲಿಗೆ ಹೋಗಿ ಬೌದ್ಧಮತಕ್ಕೆ ಸಂಬಂಧಪಟ್ಟ 'ಹೀನಯಾನಾ' ಗ್ರಂಥಗಳನ್ನು ಪ್ರಕಟಿಸಿ ಅವುಗಳ ಮೇಲೆ ಭಾಷ್ಯಗಳನ್ನು ಬರೆದನೆಂದೂ ತಿಳಿದು ಬಂದಿದೆ. ಇಂದಿಗೂ ಬುದ್ಧನ ವಿಗ್ರಹಗಳನ್ನು ಸಿಂಹಳ ದ್ವೀಪದಲ್ಲಿ ಅನೇಕ ಕಡೆಗೆ ನೋಡಬಹುದು. ಹಿಂದೂ ದೇವಾಲಯಗಳು ಕೂಡ ಅಲ್ಲಿವೆ. ಭಾರತದ ಕಲಾ ವೈಶಿಷ್ಟ್ಯವು ಅಲ್ಲಿ ಪ್ರತಿಬಿಂಬಿಸಿದೆ. ಇಲ್ಲಿಯ ತತ್ವವು ಅಲ್ಲಿಯೂ ಪ್ರತಿಧ್ವನಿತವಾಗಿದೆ.

ಬರ್ಮಾದಲ್ಲಿಯೂ ಬೌದ್ಧಮತವು ಕೆಲವು ಶತಮಾನಗಳ ನಂತರ ಹರಡಿತೆಂದು ಕೆಲವರ ಅಭಿಪ್ರಾಯವು, ಹಿಂದೂ ಸಂಸ್ಕೃತಿಯೂ ಅಲ್ಲಿ

ಹರಡಿತ್ತೆಂದು ಅಲ್ಲಿಯ ವಾಸ್ತುಶಿಲ್ಪಗಳಿಂದ, ನಡೆನುಡಿಗಳಿಂದ ತಿಳಿದು ಬಂದಿದೆ. ಪಗೋಡಗಳೆಂದು ಕರೆಯಲ್ಪಡುತ್ತಿರುವ ಬುದ್ಧನ ಸ್ತೂಪಗಳು, ಶೈವ ಮತ್ತು ವೈಷ್ಣವ ಮತಸೂಚಕವಾದ ಶಿಲ್ಪಕಲಾವಸ್ತುಗಳು ಇಂದಿಗೂ ಅಲ್ಲಿ ಕಂಡು ಬರುತ್ತವೆ.

ಬರ್ಮಾಕ್ಕೆ ಭೂಭಾಗದಿಂದ ಸಮೀಪವಾಗಿರುವ ಕಾಂಬೋಡಿಯಾ ದಲ್ಲಿಯೂ ಭಾರತೀಯ ಸಂಸ್ಕೃತಿಯ ವ್ಯಾಪ್ತಿಯಿತ್ತೆಂದು ಅಲ್ಲಿ ದೊರೆ ತಿರುವ ಗುಪ್ತರ ಮಾದರಿಯ ಶಿಲ್ಪಕಲೆಯಿಂದಲೂ ಪುರಾಣೇತಿಹಾಸವನ್ನು ತೋರ್ಪಡಿಸುವ ಶಾಸನಗಳಿಂದಲೂ ತಿಳಿದುಬರುತ್ತದೆ. ಅಜಂತಾದಲ್ಲಿಯ ಗುಪ್ತರ ಕಾಲದ ಶಿಲ್ಪಕಲೆಯ ಸ್ವರೂಪವನ್ನು ಇಲ್ಲಿ ಕಾಣಬಹುದು. ಈ ಕಲಾವಸ್ತುಗಳನ್ನು ರಾಮಾಯಣ ಮಹಾಭಾರತಗಳಿಂದ ಆರಿಸಿಕೊಂಡಿ ದ್ದಾಗಿದೆ. ಬುದ್ಧನ ಪ್ರತಿಮೆಗಳು ಕೂಡ ಇಲ್ಲಿ ದೊರೆತಿವೆ. ಈ ಹಲ ಕೆಲವು ಆಧಾರಗಳಿಂದ ಭಾರತ ಸಂಸ್ಕೃತಿಯು ದೂರದೇಶಗಳಲ್ಲಿ ಹರಡಿ ದಾಗ್ಯೂ ಅದರ ವೈಶಿಷ್ಟ್ಯವು ಬದಲಾಗಲಿಲ್ಲವೆಂದು ದೃಢಪಡುತ್ತದೆ.

ಸಯಾಮಿನಲ್ಲಿ ಮಾತ್ರ ಹಿಂದೂ ಸಂಸ್ಕೃತಿಯು ಕಾಂಬೋಡಿಯಾ ದಂತೆ ಹರಡಿತು. ಅದೇ ರೀತಿಯಲ್ಲಿ ವಾಸ್ತುಶಿಲ್ಪವೂ ಬೆಳೆಯಿತು. ಬಂಕಾಕಿನ ದೇವಾಲಯಗಳಲ್ಲಿ ರಾಮಾಯಣವು ಚಿತ್ರಿಸಲ್ಪಟ್ಟಿತ್ತು. ಬ್ರಹ್ಮ, ವಿಷ್ಣು, ಮಹೇಶ್ವರರಿಗೆ ಪ್ರತ್ಯೇಕವಾಗಿ ದೇವಾಲಯಗಳು ನಿರ್ಮಿಸಲ್ಪಟ್ಟವು. ಹಿಂದೂಮತೀಯ ಪದ್ಧತಿಗಳು ಆಚರಣೆಗೆ ತರಲ್ಪಟ್ಟವು. ಅವು ಇಂದಿಗೂ ಆಚರಣೆಯಲ್ಲಿವೆ. ಬೌದ್ಧಮತವು ೧೩ನೆಯ ಶತಮಾನದಲ್ಲಿ ಬಳಕೆಗೆ ಬಂದು ಹಿಂದೂ ಮತದ ಪ್ರಾಬಲ್ಯವನ್ನು ಕಡಿಮೆ ಮಾಡಿತು.

ಹಿಂದೂ ಸಂಸ್ಕೃತಿಯು ಚಂಪಾದಲ್ಲಿಯೂ ಪಾಲಿನೇಷಿಯಾದಲ್ಲೂ ಮಲಯ ಪರ್ಯಾಯ ದ್ವೀಪಸ್ತೋಮಗಳಲ್ಲೂ ವ್ಯಾಪಿಸಿತ್ತು. ಬೌದ್ಧ ಧರ್ಮದಂತೆ ಹಿಂದೂ ಧರ್ಮವೂ ಹಿಂದೂ ಪದ್ಧತಿಗಳೂ ಬಳಕೆಗೆ ಬಂದವು. ಮಲಯಾ ಪರ್ಯಾಯ ದ್ವೀಪಸಮೂಹದಲ್ಲಿ ಅನೇಕ ಬೌದ್ಧರು ನೆಲೆಸಿ ಬೌದ್ಧ ಸಂಸ್ಕೃತಿಯನ್ನು ವ್ಯಾಸಂಗ ಮಾಡುವದರಲ್ಲಿ ನಿರತರಾಗಿದ್ದರು.

ಶ್ರೀ ವಿಜಯ (ಸುಮಾತ್ರಾ)ವು ಬೌದ್ಧ ಸಂಸ್ಕೃತಿಯ ವ್ಯಾಸಂಗ ಕೇಂದ್ರ ವಾಗಿದ್ದಿತು. ಪೂರ್ವ ದೇಶಗಳಲ್ಲೆಲ್ಲ ಶ್ರೀ ವಿಜಯವೇ ಮುಖ್ಯ ಸ್ಥಳ ವಾಗಿತ್ತು.

ಇದಲ್ಲದೆ ಹಿಂದೂ ಸಂಸ್ಕೃತಿಯು ಜಾವಾ ಮತ್ತು ಬಲಿ ದ್ವೀಪ ಗಳಲ್ಲಿಯೂ ವ್ಯಾಪಿಸಿತ್ತು. ಬಹಳ ಹಿಂದಿನ ಕಾಲದಿಂದಲೂ ಭಾರತೀಯರು ಈ ದ್ವೀಪಗಳ ನಿವಾಸಿಗಳೊಡನೆ ವ್ಯಾಪಾರ ಮಾಡುತ್ತಿದ್ದರು. ಇಲ್ಲಿಯ ಸರಕುಗಳು ಪಾಶ್ಚಾತ್ಯರನ್ನೂ ಕಾಲಕ್ರಮೇಣ ಆಕರ್ಷಿಸಿ, ಅವುಗಳ ವ್ಯಾಪಾರದಿಂದ ಅವು ರಾಜಕೀಯ ಗೊಂದಲವನ್ನೆಬ್ಬಿಸಿದವು. ಕೆಲವು ಭಾರತೀಯರು ಇಲ್ಲಿಯೇ ನೆಲಸಿ ತಮ್ಮ ಸಂಸ್ಕೃತಿಯನ್ನು ಬೆಳೆಸಿದರು. ಜಾವಾ ಮತ್ತು ಬಲಿ ದ್ವೀಪಗಳಲ್ಲಿ ಹಿಂದೂ ಸಂಸ್ಕೃತಿಯ ಸಂಪೂರ್ಣ ಬೆಳವಣಿಗೆಯನ್ನು ಸೂಚಿಸುವ ಸಾಹಿತ್ಯವಿದೆ, ಕಲೆಯಿದೆ. ಇಲ್ಲಿ ರಾಮಾ ಯಣ ಮಹಾಭಾರತಗಳ ಸನ್ನಿವೇಶಗಳು ಕೆತ್ತಲ್ಪಟ್ಟಿವೆ. ಅವುಗಳ ಭಾಷಾಂತರಗಳೂ ಇಲ್ಲಿವೆ. ಜಾವಾದಲ್ಲಿರುವ (ಬೋರೋಬೊಡೂರು) ಶಿಲ್ಪಕಲಾಚಾತುರ್ಯದಿಂದ ಕೂಡಿದ ಕಟ್ಟಡವು—ಫರ್ಗುಸನ್ ಮುಂತಾದ ವಿಖ್ಯಾತ ಕಲಾನಿಪುಣರ ಅಭಿಪ್ರಾಯದಲ್ಲಿ - ಪಶ್ಚಿಮ ಹಿಂದುಸ್ಥಾನದ ಶಿಲ್ಪಿಗಳು ಕಟ್ಟಿದ್ದಾಗಿದೆ. ಆದ್ದರಿಂದ ಈ ದ್ವೀಪಸ್ತೋಮಗಳಲ್ಲಿ ಹರಡಿದ ಭಾರತೀಯ ಸಂಸ್ಕೃತಿಯನ್ನು ಕೆಲವು ಚರಿತ್ರಕಾರರು ಬೃಹತ್ತರ ಭಾರತಕ್ಕೆ ಸೇರಿದ್ದೆಂದು ಅಭಿಪ್ರಾಯಪಟ್ಟಿದ್ದಾರೆ. ಅಂದ ಬಳಿಕ ಭಾರತದ ಕೀರ್ತಿಯು ಇಮ್ಮಡಿಯಾಯಿತು. ಬಲಿದ್ವೀಪದಲ್ಲಿಯೂ ಹಿಂದುಸ್ಥಾನದಲ್ಲಿ ರೂಢಿ ಯಲ್ಲಿದ್ದಂತೆ ಹಿಂದೂ ದೇವತೆಗಳನ್ನು ಆರಾಧಿಸುವ ಪದ್ಧತಿಯು ಹಿಂದಿ ನಿಂದ ಆಚರಣೆಯಲ್ಲಿದೆ.

ಮೇಲೆ ವಿವರಿಸಿರತಕ್ಕ ಅಂಶಗಳನ್ನು ಸಮಾಲೋಚಿಸಿದಲ್ಲಿ ಭಾರ ತೀಯ ಸಂಸ್ಕೃತಿಯ ವೈಶಾಲ್ಯವೂ ಮತ್ತು ಅನುಪಮವಾದ ಹಿರಿಮೆಯೂ ಗೋಚರವಾಗುತ್ತವೆ. ಭೌಗೋಲಿಕವಾಗಿ ಭಾರತಕ್ಕೆ ನಿರ್ದಿಷ್ಟವಾದ ಸ್ವಾಭಾವಿಕ ಮೇಲ್ಮೆಯಿದ್ದರೂ ಬಹಳ ಹಿಂದಿನ ಕಾಲದಲ್ಲಿಯೇ ಅದು ಸಂಸ್ಕೃತಿಯಲ್ಲಿಯೂ ನಾಗರಿಕತೆಯಲ್ಲಿಯೂ ಪ್ರಗತಿಯ ಹೆಚ್ಚಳವನ್ನು

ಕೊಂಡುಕೊಂಡಿತು. ಅಲ್ಲದೆ ಮೇಲೆ ವಿವರಿಸಿದ ದೂರ ದೇಶಗಳಲ್ಲೂ ದ್ವೀಪಾಂತರಗಳಲ್ಲೂ ತನ್ನ ಸಂಸ್ಕೃತಿಯ ಪ್ರಭಾವನನ್ನು ಹರಡಿತು. ಭಾರತೀಯ ಸಂಸ್ಕೃತಿಯು ಎಷ್ಟು ವಿಶಾಲವಾದುದು ಮತ್ತು ಸರಳ ಜೀವನ ನೀತಿಯನ್ನು ಬೋಧಿಸುವಂತಹದು ಎಂಬದನ್ನು ಹೇಳಲು ಇಲ್ಲಿಯ ಪಾರಮಾರ್ಥಿಕ ದೃಷ್ಟಿಯೇ ಸಾಕು. ಉಪನಿಷದ್ವಾಕ್ಯಗಳು, ಬುದ್ಧನ ತತ್ವ, ಮಹಾವೀರನ ಬೋಧೆ, ಯೋಗಾಭ್ಯಾಸ, ಅಶೋಕನ ಧರ್ಮಶಾಸನಗಳು ವಿಶ್ವಕ್ಕೇ ಅಮರವಾಣಿಯಲ್ಲಿ ಸಾರಿ ಹೇಳಲ್ಪಟ್ಟವೆ. ಈ ಜೀವನ ತತ್ವಗಳು ಇಂದಿಗೂ ಸುವರ್ಣಾಕ್ಷರಗಳಲ್ಲಿ ಬರೆದಂತೆ ಪ್ರತಿಯೊಬ್ಬರ ಮನಸಿನ ಮೇಲೂ ಪರಿಣಾಮವನ್ನುಂಟು ಮಾಡಿವೆ. ಭಾರತವು ಆಕ್ರಮಣ ನೀತಿ ಯನ್ನನುಸರಿಸಲಿಲ್ಲ. ಮಾನವ ಪ್ರೇಮವನ್ನು, ಶಾಂತಿಯನ್ನು, ಸಾತ್ವಿಕ ಜೀವನವನ್ನು ಬೋಧಿಸಿತು; ವಿಶ್ವಕ್ಕೇ ಹಿರಿದೆನಿಸಿಕೊಳ್ಳುವಂತಹ ತನ್ನ ನಾಗರಿಕತೆಯನ್ನು, ಸಂಸ್ಕೃತಿಯನ್ನು ದೂರದೇಶಗಳಲ್ಲೂ ಹರಡಿತು. ಧರ್ಮ ತತ್ವದಿಂದ ಮನುಷ್ಯನ ಮನಸ್ಸನ್ನು ಗೆಲ್ಲುವ ಸಾಮ್ರಾಜ್ಯವೇ ಭಾರತದ ಪರಮ ಧ್ಯೇಯವಾಯಿತು. ಮಾನವ ಪ್ರೇಮವನ್ನೂ ಶಾಂತಿಯನ್ನೂ ಪಾರ ಮಾರ್ಥಿಕ ಸದ್ವಿದ್ಯೆಯನ್ನೂ ಬೋಧಿಸಿದ, ಬೆಳೆಸಿದ ಭಾರತೀಯ ಸಂಸ್ಕೃತಿಯ ಪ್ರಾಚೀನತೆಯನ್ನೂ ಪೂಜ್ಯತೆಯನ್ನೂ ಶಂಕಿಸುವವರುಂಟೇ ?



## ೧೭ ಪರಿಸಮಾಪ್ತಿ

ಹಿಂದಿನ ಅಧ್ಯಾಯಗಳಲ್ಲಿ ಸಂಕ್ಷೇಪವಾಗಿ ವಿವರಿಸಿದ ಏಷ್ಯಾಖಂಡದ ಹಲವಾರು ದೇಶಗಳಲ್ಲಿಯೂ ಮತ್ತು ಇಜಿಪ್ತದಲ್ಲಿಯೂ ಇಂದು ಪ್ರಪಂಚ ದಲ್ಲಿಯೇ ಉನ್ನತ ನಾಗರಿಕತೆಯನ್ನು ಅವಲಂಬಿಸಿರತಕ್ಕ ಜನಾಂಗಗಳ ಹಿರಿಯರು ಅಥವಾ ಮೂಲಪುರುಷರು — ಹೇಗೆ ಪ್ರಾಚೀನ ಕಾಲದಲ್ಲಿಯೇ ನಾಗರಿಕತೆಯಲ್ಲಿ ಮುಂದುವರಿದಿದ್ದರೆಂಬುದು ತಿಳಿಯುಬರುತ್ತದೆ. ಒಂದು ನಾಗರಿಕತೆಯಲ್ಲಿ ವಿಶೇಷ ಪ್ರಗತಿಯ ಚಿಹ್ನಗಳು ಕಾಣಬರುವದು ಅನೇಕ ಪ್ರಭಾವಗಳ ಪರಿಣಾಮದಿಂದ, ಸನ್ನಿವೇಶ ಸೌಲಭ್ಯಗಳಿಂದ. ಆದಕಾರಣ ಒಂದು ನಾಗರಿಕತೆಗೂ ಇನ್ನೊಂದು ನಾಗರಿಕತೆಗೂ ಇರತಕ್ಕ ವ್ಯತ್ಯಾಸ ಗಳಿಗೆ ಮೇಲ್ಕಂಡ ಸೌಲಭ್ಯಗಳು ದೊರಕುವಿಕೆ ಅಥವಾ ಅವುಗಳ ಅಭಾವವೇ ಕಾರಣ. ಪ್ರಥಮತಃ ಸ್ಪಷ್ಟಪಡಿಸಿದಂತೆ ನಾಗರಿಕತೆಯು ಫಲವತ್ತಾದ ನದಿಗಳ ಪ್ರದೇಶಗಳಲ್ಲಿ ಪ್ರಾರಂಭವಾಯಿತು. ಆದರೆ ಚರಿತ್ರೆಗೆ ಗೊತ್ತಿರ ತಕ್ಕ ಜನಾಂಗಗಳು ಇತರ ಸನ್ನಿವೇಶಗಳಲ್ಲಿಯೂ ನೆಲೆಸಿದವು ಅಲ್ಲಿಯ ವಾತಾವರಣಕ್ಕನುಗುಣವಾಗಿ ಅವುಗಳ ಜೀವನದ ರೀತಿಯಲ್ಲಿ ಮಾರ್ಪಾಟು ಆಯಿತು.

ಏಬ್ರಾಹಂ ಸಂತತಿಯವರು (ಸೆಮಿಟಿಕ್ ಜನಾಂಗಕ್ಕೆ ಸೇರಿದವರು) ಇಜಿಪ್ತದ ಮರುಭೂಮಿಯಲ್ಲೂ ಇಜಿಪ್ತದ ಫಾಯರೋವ್ಹಾ ದೊರೆಗಳು ನೈಲ ನದಿಯ ಕಣಿವೆಗಳಲ್ಲೂ ಆಳಿದರು. ಕ್ರೀಟನ ಜನರು ಮತ್ತು ಫೀನಿ ಷಿಯಾ ದೇಶದ ಜನರು ಸಮುದ್ರ ತೀರ ಪ್ರದೇಶಗಳಲ್ಲಿಯೂ ನೆಲೆಸಿದರು. ಅಸ್ಸೀರಿಯನರು ಮತ್ತು ಇಜಿಪ್ತದೊಡದೆ ಸಂಬಂಧ ಬೆಳೆಸಿದ್ದ ಹಿಟ್ಟೈಟ್ ಪಂಗಡದ ಜನರು ಬೆಟ್ಟಗುಡ್ಡ ಪ್ರದೇಶಗಳಲ್ಲಿಯೂ ನೆಲೆಸಿದ್ದರು. ಇಜಿಪ್ತದ ಜನರೂ ಬ್ಯಾಬಿಲೋನಿಯಾ ದೇಶದ ಜನರೂ ಫಲವತ್ತಾದ ನದಿಗಳ

ಕಣಿವೆಗಳಲ್ಲಿ ನೆಲೆಸಿದ್ದರು. ಆರ್ಯರು ಭಾರತ ದೇಶದ ಸಿಂಧೂ ಗಂಗಾ ನದಿಗಳ ಬಯಲುಗಳಲ್ಲಿ ನೆಲೆಸಿದ್ದರು. ಈ ಪ್ರಕಾರವಾಗಿ ಮೇಲೆ ವಿವರಿಸಿದ ಜನರು ವಿವಿಧ ಪ್ರಕೃತಿ ಸನ್ನಿವೇಶಗಳಲ್ಲಿ ನೆಲೆಸಿ ತಮ್ಮ ತಮ್ಮ ನಾಗರಿಕತೆಯನ್ನು ವಿಕಾಸಗೊಳಿಸಿದರು.

ಮರುಭೂಮಿಯ ನಿವಾಸಿಗಳು ವ್ಯವಸಾಯದಲ್ಲಿ ನಿರತರಾಗಲು ಅನುಕೂಲಗಳಿಲ್ಲದೆ ಸ್ಥಳದಿಂದ ಸ್ಥಳಕ್ಕೆ ಸಂಚರಿಸತಕ್ಕವರಾಗಿಯೂ ಒಬ್ಬ ಯಜಮಾನನಿಗೆ ಅಧೀನರಾಗಿಯೂ ಒಂದೇ ದೇವರಲ್ಲಿ ಅಚಲವಾದ ನಂಬಿಕೆಯುಳ್ಳವರಾಗಿಯೂ ಇದ್ದು, ತಮ್ಮದೇ ಆದ ಒಂದು ಬಗೆಯ ನಾಗರಿಕತೆಯನ್ನು ಬೆಳೆಸಿದರು. ಸಮುದ್ರ ತೀರದ ಜನರು ಸಾಹಸಿಗಳಾಗಿಯೂ ಅನೇಕ ದೂರ ದೇಶದ ಜನರನ್ನು ನೋಡಿದವರಾಗಿಯೂ ವ್ಯಾಪಾರದಲ್ಲಿ ಮುಂದುವರಿದವರಾಗಿಯೂ ಇದ್ದುಕೊಂಡು ತಮ್ಮದೇ ಆದ ಒಂದು ತರಹದ ಕಲಾಕುಶಲತೆಯ—ಸರಳ ಜೀವನದ ನಾಗರಿಕತೆಯನ್ನು ಬೆಳೆಸಿದರು. ಬೆಟ್ಟ ಗುಡ್ಡಗಳಲ್ಲಿ ನೆಲೆಸಿದ್ದ ಜನರು ಸಶಕ್ತರಾಗಿಯೂ ಯುದ್ಧ ಮಾಡುವಲ್ಲಿ ನಿಸ್ಸೀಮರಾಗಿಯೂ ತಮ್ಮ ನಾಗರಿಕತೆಯನ್ನು ಬೆಳೆಸಿದರು. ಆದರೆ ಅವರಿಗೆ ಸ್ವತಂತ್ರವಾಗಿ ಉತ್ತಮ ನಾಗರಿಕತೆಯನ್ನು ವೃದ್ಧಿಗೊಳಿಸತಕ್ಕ ಬುದ್ಧಿ ಸೂಕ್ಷ್ಮತೆ, ಭಾವನಾಶಕ್ತಿ ಇರಲಿಲ್ಲ. ಆದಕಾರಣ ಕುಶಲ ವಿದ್ಯೆಗಳನ್ನು, ಲಲಿತ ಕಲೆಗಳನ್ನು ಅವರು ಅನುಕರಣ ಮಾಡಿಕೊಂಡರು. ಮೇಲೆ ವಿವರಿಸಿದ ಪಂಗಡಗಳಲ್ಲಿ ನದಿಯ ಬಯಲುಗಳಲ್ಲಿ ನೆಲೆಸಿದವರೇ ನಾಗರಿಕತೆಯಲ್ಲಿ ಅತ್ಯಂತ ಮುಂದುವರಿದವರು. ಅವರು ಜೀವನಕ್ಕಾಗಿ ಹೆಚ್ಚು ಶ್ರಮಪಡಬೇಕಾಗಿರಲಿಲ್ಲ. ಅವರಿಗೆ ವಿಶ್ರಾಂತಿಯು ದೊರೆಯುತ್ತಿತ್ತು. ಆದಕಾರಣ ಅವರು ಸಾಹಿತ್ಯ, ಗಣಿತಶಾಸ್ತ್ರ, ಜ್ಯೋತಿಶ್ಯಾಸ್ತ್ರ, ಆಯುರ್ವೇದ, ಆಡಳಿತ ಪದ್ಧತಿ, ವೇದಾಂತ, ಸಾಮಾಜಿಕ ವ್ಯವಸ್ಥೆ ಇವುಗಳಲ್ಲಿ ಮುಂದುವರಿದರು. ಆದರೆ ಈ ತರದ ನಾಗರಿಕತೆಯಲ್ಲಿ ವ್ಯಕ್ತಿಗಳಿಗೆ ಸ್ವಾತಂತ್ರ್ಯವು ಕಡಿಮೆಯಾಗಿತ್ತು.

ಮೇಲ್ಕಂಡ ತರಹದ ನಾಗರಿಕತೆಗಳಲ್ಲಿ—ಸನ್ನಿವೇಶ ವ್ಯತ್ಯಾಸದಿಂದ ಜೀವನದ ರೀತಿಯಲ್ಲಿ ಭಿನ್ನತೆಯಿದ್ದರೂ, ಕೆಲವು ವಿಚಾರಗಳಲ್ಲಿ, ಅವುಗಳಲ್ಲಿ

ಸಾಮರಸ್ಯವಿದೆ. ಮನುಷ್ಯನ ಬುದ್ಧಿಯು ಕೆಲವು ಪ್ರಮುಖ ವಿಚಾರಗಳಲ್ಲಿ ಒಂದೇ ರೀತಿಯಲ್ಲಿ ಬೆಳೆದಿದೆಯೆಂದು ಅವರ ಮತೀಯ ಭಾವನೆಗಳಿಂದ ನಿರ್ಧರಿಸಬಹುದು. "ಶಾಶ್ವತ ವಸತಿಗಾಗಿ ಅಲೆದಾಡುತ್ತಿದ್ದ ಜನಾಂಗಗಳ ಪಂಗಡಗಳು ಅನುಕೂಲವಾದ ಸ್ಥಳಗಳಲ್ಲಿ ನೆಲೆಸಿದ ನಂತರವೇ ಮತವು ಬೆಳೆದಿರಬೇಕು. ಹೀಗೆ ನಾಗರಿಕತೆಯಲ್ಲಿ ಮುಂದುವರಿದಂತೆಲ್ಲ ಅಲೆದಾಟವು ಕಡಿಮೆಯಾಗುತ್ತ ಬಂದಿತು. ಹಳೆಯ ಶಿಲಾಯುಗದ ಮನುಷ್ಯನು ಹೊಸ ಶಿಲಾಯುಗದ ಮನುಷ್ಯನಿಗಿಂತ ಹೆಚ್ಚು ಅಲೆದಾಟದ ಸ್ವಭಾವದವನಾಗಿದ್ದನು" ಎಂದು ವೆಲ್ಸರ ಅಭಿಪ್ರಾಯ.*

ಪ್ರಾಚೀನ ಪ್ರಪಂಚದಲ್ಲಿ ಪ್ರತಿಯೊಂದು ಜನಾಂಗವೂ ತನ್ನವೇ ಆದ ಕೆಲವು ದೇವರನ್ನು ಪೂಜಿಸುತ್ತಿತ್ತು. ಆದರೆ ಈ ದೇವರುಗಳನ್ನು ಪ್ರಾಚೀನ ಜನಾಂಗಗಳು ಯಾವ ಹೆಸರಿನಿಂದ ಕರೆದರೂ ಅವುಗಳ ಭಾವನೆಯು ಒಂದೇ. ಈ ಜನಾಂಗಗಳಲ್ಲಿ ಸತ್ಯಾಸತ್ಯಕ್ಕೆ, ಧರ್ಮಾಧರ್ಮಕ್ಕೆ, ಕತ್ತಲೆ ಬೆಳಕಿಗೆ ಅಂತರವಿದೆ. ದೇವರು ಎಂಬ ಪೂಜ್ಯಭಾವನೆಯುಂಟಾದುದು ಪ್ರಕೃತಿಯ ವಿಶೇಷ ಶಕ್ತಿಗಳ ಮತ್ತು ಮನುಷ್ಯನ ಅತೀಂದ್ರಿಯ ಜ್ಞಾನ, ಇವುಗಳ ಸಂಪರ್ಕವಾಗಿ ಆದಂಥ ಪರಿಣಾಮದಿಂದ ಮತವು ಪುರಾತನ ನಾಗರಿಕತೆಯಲ್ಲಿ ವಿಶೇಷ ಪೂಜ್ಯಸ್ಥಾನವನ್ನು ಪಡೆದಿದೆ. ಮತ್ತು ನಾಗರಿಕತೆಯ ಅಂತಸ್ತನ್ನು ಹೆಚ್ಚಿಸಲು ಸಹಕಾರಿಯಾಗಿದೆ. ಜನಾಂಗಗಳ ಜೀವನದಲ್ಲಿ ಅಂಥಹ ಮತದ ಸಲುವಾಗಿ ಉಂಟಾದ ಪರಿಣಾಮಗಳನ್ನು ವಿಚಾರಮಾಡಲಾಗಿದೆ.

ಪುರಾತನ ಕಾಲದಲ್ಲಿ ಇಜಿಪ್ತದ ಜನರು ಸೂರ್ಯ, ನದಿ, ಇವುಗಳಲ್ಲದೆ ವಾನರ-ಮೊಸಳೆಗಳನ್ನು ಆರಾಧಿಸುತ್ತಿದ್ದರು. ಬ್ಯಾಬಿಲೋನಿಯಾದಲ್ಲಿ ಆಕಾಶ, ಭೂಮಿ, ನೀರು ಇವುಗಳನ್ನೂ ಹಿಟ್ಟೈಟ್ ಜನಾಂಗದವರು 'ತೇಷುಬ್' ಎಂಬ ಯುದ್ಧದ ದೇವರನ್ನೂ ಪೂಜಿಸುತ್ತಿದ್ದರು. ಕ್ರೀಟಿನಲ್ಲಿ ಮಾತೃದೇವತೆಯನ್ನೂ ಯಹೂದ್ಯರು ಜಹೋವನನ್ನೂ ಅಸ್ಸೀರಿಯನ್ನರು ಅಷುರ್‌ನನ್ನೂ ಪರ್ಶಿಯನರು ಅಹುರಮಜ್ದನನ್ನೂ ಭಾರತೀಯರು—

* Races of Mankind in "the Outline of History" P. 128.

ಆರ್ಯರು—ಋಗ್ವೇದ ಕಾಲದಲ್ಲಿ ಇಂದ್ರ, ಅಗ್ನಿ, ವಾಯು, ಯಮ, ವರುಣ, ಸವಿತಾ, ಚಂದ್ರ, ಮರುತ್ ಇವೇ ಮೊದಲಾದ ದೇವರುಗಳನ್ನೂ ಆರಾಧಿಸುತ್ತಿದ್ದರು. ಒಟ್ಟಿನಲ್ಲಿ ಮೊಟ್ಟ ಮೊದಲು ಈ ಜನಾಂಗಗಳು ಭೀತಿಗೂ ವಿಸ್ಮಯಕ್ಕೂ ಕಾರಣೀಭೂತವಾಗಿದ್ದ ಪ್ರಕೃತಿಯ ಶಕ್ತಿಗಳನ್ನು ಪೂಜಿಸುತ್ತಿದ್ದರು. ಆದಕಾರಣ ಮತವು ಅವರ ಭಾವನೆಯು ಬೆಳೆದಂತೆಲ್ಲ ಮಾರ್ಪಾಟಾಯಿತು.

ಮತದ ಸಂಬಂಧವಾಗಿ ಬೆಳೆದ ಪದ್ಧತಿಗಳು ಜೀವನದ ನೀತಿಯನ್ನು ಉತ್ತಮ ಪಡಿಸಿವೆ. ರಾಜತ್ವಕ್ಕೂ ದೈವತ್ವಕ್ಕೂ ಸಂಬಂಧ ಬೆಳೆಯಲು ಮತವೇ ಮೂಲ ಕಾರಣವಾಗಿದೆ. ಮನುಷ್ಯತ್ವವನ್ನೂ ಪಡೆಯಲು ಕೂಡ ಮತವೇ ಕಾರಣವಾಗಿದೆ. ಇಜಿಪ್ತದಲ್ಲಿಯೂ ಬ್ಯಾಬಿಲೋನಿಯಾದಲ್ಲೂ ಚೀನ ಜಪಾನಗಳಲ್ಲಿಯೂ ದೊರೆಯು ದೇವಾಂಶಸಂಭೂತನೆಂದು (ಜಪಾನಿನಲ್ಲಿ ಸೂರ್ಯವಂಶಜನೆಂದು) ಭಾವಿಸಲ್ಪಟ್ಟಿದ್ದನು. ಇಂದಿಗೂ ಆ ದೈವತ್ವದ ಭಾವನೆಯು ಭಾರತದಲ್ಲಿ ಮಾತ್ರವಲ್ಲದೆ ಪ್ರಾಚೀನ ಪದ್ಧತಿಗಳಿರತಕ್ಕ ಇತರ ದೇಶಗಳಲ್ಲಿಯೂ ಅಳಿಯದಂತೆ ಉಳಿದಿದೆ. ಈ ಭಾವನೆಗೆ ರಾಜಕೀಯ ದೃಷ್ಟಿಯಿಂದ ಪೂಜ್ಯಸ್ಥಾನವಿದೆ. ಸತ್ಯದಿಂದಲೂ ಧರ್ಮದಿಂದಲೂ ತನ್ನ ಪ್ರಜೆಗಳನ್ನು ರಕ್ಷಿಸತಕ್ಕ, ರಾಜ್ಯ ಶಾಸನಗಳನ್ನೂ ಮತ್ತು ಧರ್ಮ ಶಾಸನಗಳನ್ನೂ ಪಾಲಿಸತಕ್ಕ ಹೊಣೆಯು ದೈವಿಕ ಹೊಣೆಗಿಂತ ಕಡಮೆಯೂ ಅಲ್ಲ—ಬೇರೆಯೂ ಅಲ್ಲ. ಆದಿಯಿಂದಲೂ ದೇವರ ಸ್ಮರಣೆಯಿಂದ ಜೀವನ ಪಥದಲ್ಲಿ ಈ ನಾಗರಿಕ ಜನಾಂಗಗಳು ಜೀವನವನ್ನು ಸಾಗಿಸಿವೆ. ಬ್ಯಾಬಿಲೋನಿಯಾದಲ್ಲಿಯೂ ಇಜಿಪ್ತದಲ್ಲಿಯೂ ಅಲ್ಲಿಯ ಜನರು ಮಹತ್ಕಾರ್ಯವನ್ನಾರಂಭಿಸುವ ಮುನ್ನ ದೇವಸ್ಥಾನಗಳಿಗೆ ಹೋಗಿ ದೇವರ ಅನುಮತಿಯನ್ನು ಪಡೆಯುತ್ತಿದ್ದರು. ಕ್ರೀಟನಲ್ಲಿ ಡೆಲ್ಫಿಸ್, ಒರೇಕಲ್ ಅಂದರೆ ಡೆಲ್ಫಿಯ ಆಕಾಶವಾಣಿಯ ಹೇಳಿಕೆಯಂತೆ ನಡೆಯುತ್ತಿದ್ದರು. ಹೀಗೆ ಆಚರಣೆಗೆ ಬಂದ ಮತದ ಪದ್ಧತಿಗಳಲ್ಲಿ ಕೆಲವು ಮೂಢಭಕ್ತಿಯ ಆಚರಣೆಗಳೂ ಭೀಕರವಾದ ಯಜ್ಞಯಾಗಾದಿಗಳೂ ರೂಢಿಯಲ್ಲಿ ಬಂದವು. ಕೆಲವು ಕಡೆಗಳಲ್ಲಿ ದೇವರನ್ನು ಮನುಷ್ಯಾಕೃತಿಯಲ್ಲಿ ನಿರ್ಮಿಸಿ ಪೂಜಿಸುತ್ತಿದ್ದರು. ಪರ್ಶಿಯನರು ಬೆಂಕಿಯನ್ನು ಆರಾಧಿಸುತ್ತಿದ್ದರು.

ಇಂದಿಗೂ ಅವರಲ್ಲಿ ಹಿಂದೆ ಆಚರಣೆಯಲ್ಲಿದ್ದ ಕೆಲವು ಪೂಜಾ ಪದ್ಧತಿಗಳು, ತತ್ವಗಳು, ನಂಬಿಕೆಗಳು ಅನೂಚಾನವಾಗಿ ಆಚಾರಣೆಯಲ್ಲಿವೆ

ಮತವು ರಾಜಕಾರಣದಲ್ಲೂ ಮತ್ತು ಸಾಮಾಜಿಕ ಜೀವನದಲ್ಲಿಯೂ ಬದಲಾವಣೆಗಳನ್ನುಂಟುಮಾಡಲು ಮೂಲ ಕಾರಣವಾಯಿತು. ಜನರು ಸನ್ಮಾರ್ಗಗಾಮಿಗಳಾಗಿ ಸತ್ಕರ್ಮಗಳನ್ನಾಚರಿಸಬೇಕಾಗಿತ್ತಲ್ಲದೆ, ರಾಜತ್ವ ಪದ್ಧತಿಯನ್ನು ಗೌರವಿಸಿ, ಅದಕ್ಕೆ ಆಧೀನರಾಗಿ, ಸೌಜನ್ಯದಿಂದ ನಡೆದು ಕೊಳ್ಳಬೇಕಾಗಿದ್ದಿತು. ರಾಜರು ಕೂಡ ರಾಜ್ಯಾಭಿಷೇಕ ಕಾಲದಲ್ಲಿ ಸತ್ಯ ದಿಂದಲೂ ಧರ್ಮದಿಂದಲೂ ರಾಜ್ಯಭಾರ ಮಾಡುವದಾಗಿ ಪ್ರಮಾಣ ವಚನ ಸ್ವೀಕಾರ ಮಾಡಬೇಕಾಗಿದ್ದಿತು. ಅಶೋಕ, ಖಾರವೇಲ, ಶಿವಾಜಿ ಮುಂತಾದ ರಾಜರು ಇಂಥ ಪ್ರತಿಜ್ಞೆಯನ್ನು ಸ್ವೀಕರಿಸಿದ್ದರು. ವೇದಗಳ ಕಾಲದಲ್ಲಿಯೇ ರಾಜಕಾರಣವು ಬೆಳೆದಿತ್ತು ಆ ಕಾಲದಲ್ಲಿ ರಾಜರನ್ನು ಆರಿಸುತ್ತಿದ್ದರು. ಸಭಾ ಮತ್ತು ಸಮಿತಿ ಎಂಬ ಎರಡು ಮುಖ್ಯ ಸಭೆಗಳು ಆಡಳಿತ ನಿರ್ವಹಣೆ ಯಲ್ಲಿ ಸಹಾಯಕವಾಗಿದ್ದವು. ಇವುಗಳ ಒಡೆತನ ಬಾಧ್ಯತೆಗಳ ಮತ್ತು ರಾಜರ ಕರ್ತವ್ಯಗಳ ವಿಷಯವಾಗಿ ಕೌಟಿಲ್ಯನ ಅರ್ಥಶಾಸ್ತ್ರ, ಕಾಮಂಡಕನ ನೀತಿಸಾರ, ಮತ್ತು ಶುಕ್ರಾಚಾರ್ಯರ ಶುಕ್ರನೀತಿಸಾರ ಇವುಗಳಿಂದ ಹೆಚ್ಚು ವಿವರಗಳು ತಿಳಿಯಬರುತ್ತವೆ. ಮನುವಿನಿಂದ ಬೃಹಸ್ಪತಿಯ ವರೆಗೂ ರಾಜನೀತಿಜ್ಞರ ಅಭಿಪ್ರಾಯ ರೀತ್ಯಾ ಪ್ರಜಾಹಿತ ರಕ್ಷಣೆಗಾಗಿ ರಾಜರೊಡನೆ ಮಂತ್ರಿಗಳು ಆಲೋಚನೆ ಮಾಡಲೇಬೇಕಾಗಿತ್ತು. ಹಿಂದೂ ರಾಜ್ಯಾಂಗದಲ್ಲಿ ಮಂತ್ರಿಗಳು ಪ್ರಜಾಹಿತ ರಕ್ಷಣೆಗಾಗಿಯೇ ಕೆಲಸ ಮಾಡಬೇಕಾಗಿದ್ದುದು ಅವರ ಅಧಿಕಾರವಾಗಿತ್ತು.

ಮನುವಿನಿಂದ ಬೃಹಸ್ಪತಿಯ ವರೆಗೂ ರಾಜನು ರಾಜಕಾರಣ ಮಂತ್ರಿಯೊಡನೆ ಆಪ್ತಾಲೋಚನೆ ಮಾಡಬೇಕೆಂದೇ ಕಟ್ಟಾದ ನಿಯಮ ವಿದ್ದಿತು. ಹಿಂದುಗಳ ಆಡಳಿತೆಯ ಪದ್ಧತಿಯ ಕಟ್ಟಳೆಯು ಪ್ರಜಾಹಿತ ದೃಷ್ಟಿಯಿಂದ ಮಂತ್ರಿಗಳು ರಾಜನನ್ನು ವಿರೋಧಿಸಿಯೇ ತೀರಬೇಕೆಂಬ ದಾಗಿತ್ತು. ಅಶೋಕ, ರುದ್ರಮುನಿ ಮುಂತಾದವರು ರಾಜ್ಯಭಾರದಲ್ಲಿ ಪ್ರಜೆಗಳ ಸಲಹೆಯನ್ನು ತೆಗೆದುಕೊಳ್ಳುತ್ತಿದ್ದರೆಂಬ ಉದಾಹರಣೆಗಳು ಉಂಟು.

ಮಹಾಭಾರತದ ಕಾಲದಲ್ಲಿಯೂ ರಾಜನೀತಿಯು ಬೆಳೆದಿತ್ತು. ರಾಜ್ಯದಲ್ಲಿ ವಿಪ್ಲವ ಅಥವಾ ಕ್ರಾಂತಿ ತಲೆದೋರಿದಾಗ ರಾಜರು ಕೆಲವು ಮುಖ್ಯಾಧಿಕಾರಿಗಳಲ್ಲಿಯೂ ತಮ್ಮ ಸಂಬಂಧಿಗಳಲ್ಲಿಯೂ ಮಂತ್ರಾಲೋಚನೆ ನಡೆಸುತ್ತಿದ್ದರು. ದುರ್ಯೋಧನನಿಗೆ ಭೀಷ್ಮ, ದ್ರೋಣ, ವಿದುರ, ಶಕುನಿ ಮುಂತಾದವರೂ ಪಾಂಡವರಿಗೆ ಶ್ರೀ ಕೃಷ್ಣನೂ ನೀತಿಬೋಧಕರಾಗಿದ್ದರು. ಪ್ರಾಚೀನ ಭಾರತದಲ್ಲಿ ಗ್ರಾಮಪಂಚಾಯಿತಿ ಆಡಳಿತದ ವ್ಯವಸ್ಥೆಯಿತ್ತು.

ಮತದಿಂದ ವಿದ್ಯಾಭ್ಯಾಸವು ಹೆಚ್ಚು ಪ್ರಚಾರಕ್ಕೆ ಬಂದಿತು ಮತದ ಪದ್ಧತಿಗಳಲ್ಲಿ ಗುರುಗಳು ಶ್ರೇಷ್ಠತ ಗತಿಯ ವಿದ್ಯೆಯನ್ನು ಪ್ರಚಾರಕ್ಕೆ ತಂದರು. ಬರವಣಿಗೆಯು ಇವರಿಂದಲೇ ಪ್ರಾರಂಭಿಸಲ್ಪಟ್ಟಿತು. ಒಟ್ಟಾರೆ ಎಲ್ಲ ಸಾಹಿತ್ಯಗಳೂ ಮುಂಚೆ ಮತದ ಸಲುವಾಗಿಯೇ ಬೆಳೆದವು. ಮತದ ವಿಚಾರದಲ್ಲಿ ಆವಿರ್ಭವಿಸಿದ ಉಚ್ಚ ನೀಚ ಭಾವನೆಗಳಿಂದ ಜ್ಯೋತಿ-ಶ್ಯಾಸ್ತ್ರವು ಬೆಳೆಯಿತು ಮತ್ತು ಮತವು ಒಂದು ಜನಾಂಗವನ್ನು ಒಟ್ಟು ಗೂಡಿಸಲು ಸಾಧನವಾಯಿತು.

ಮತವು ಪ್ರಬಲವಾದಂತೆಲ್ಲ ತತ್ವಜ್ಞಾನವೂ ಬೆಳೆಯಿತು. ಅಲ್ಲದೆ ಮೇಲೆ ವಿವರಿಸಿದ ಲಲಿತಕಲೆಗಳೂ, ವಿಜ್ಞಾನಗಳೂ ಬೆಳೆದವು. ನಾಗರಿಕತೆಯ ಬೆಳವಣಿಗೆಯಲ್ಲಿ ಮತವು ರೂಢಿಗೆ ಬಂದಂತೆಲ್ಲ ಭಾಷೆ ಮತ್ತು ಬರೆವಣಿಗೆಗಳು ಬಹಳ ಮುಖ್ಯವಾದವುಗಳಾದವು. ಬರೆವಣಿಗೆಯು ಬಹಳ ಜಾಗ್ರತೆಯಾಗಿ ಬರಲಿಲ್ಲ. ಅನೇಕ ರೀತಿಯ ಚಿಹ್ನೆಗಳ ಸಾಧನಗಳಾದ ನಂತರ ಬರೆವಣಿಗೆಯು ಉಪಯೋಗದಲ್ಲಿ ಬಂದಿತು. ಆದ್ದರಿಂದ ಭಾಷೆಯು ಬರೆವಣಿಗೆಗಿಂತ ಪ್ರಾಚೀನವಾದುದು. ಇಂದು ನಮಗೆ ಬರೆವಣಿಗೆಯು ಒಂದು ವಿಷಯವನ್ನು ತಿಳಿಯಲು ಸುಲಭವಾದ ಸಾಧನವಾಗಿದೆ. ವಿಜ್ಞಾನದ ಇತರ ಸಾಧನಗಳೂ ಇವೆ. ಆದರೆ ಚರಿತ್ರೆಯು ಬಹಳ ಮಟ್ಟಿಗೆ ಬರೆವಣಿಗೆಗಳ ಆಧಾರದ ಮೇಲೆ ಬರೆಯಲ್ಪಟ್ಟಿದೆ. ಬರೆವಣಿಗೆಯಲ್ಲೂ ಭಾಷೆಗಳಷ್ಟೇ ವೈವಿಧ್ಯವಿದೆ ಇಂದು ಪ್ರಪಂಚದಲ್ಲಿ ಪ್ರಚಲಿತವಾಗಿರತಕ್ಕ ಮತ್ತು ಪ್ರಗತಿಯ ಮೇಲ್ಮೆಯನ್ನು ಪಡೆದಿರತಕ್ಕ ಜನಾಂಗಗಳ ಮೂಲವನ್ನು ಮತ್ತು ಮೂಲನಿವಾಸ ಸ್ಥಾನವನ್ನು ಭಾಷಾಶಾಸ್ತ್ರಜ್ಞರು ನಿಶ್ಚಯಿಸಿರುತ್ತಾರೆ. ಆರ್ಯರ ವಂಶಕ್ಕೆ ಸೇರಿದ ಭಾಷೆಗಳನ್ನು ಉಪಯೋಗಿಸುತ್ತಿರುವವರ

ನಾಗರಿಕತೆಯೇ ಉತ್ಕೃಷ್ಟವಾದುದು. ಅದರಲ್ಲಿ ಏಷ್ಯಾದಲ್ಲಿ ನೆಲೆಸಿದವರ ನಾಗರಿಕತೆಯೇ ಪ್ರಾಚೀನವಾದುದು.

ಮೇಲೆ ವಿವರಿಸಿದ ನಾಗರಿಕತೆಯು ಪ್ರಾಚೀನ ಏಷ್ಯಾ ಮತ್ತು ಇಜಿಪ್ತಿನಲ್ಲಿ ಅಭಿವೃದ್ಧಿಯನ್ನು ಪಡೆದುದಾಗಿದೆ. ಇದು ನಾವು ಆಧುನಿಕ ನಾಗ-ರಿಕತೆಯ ಪ್ರಭಾವಕ್ಕೊಳಗಾಗಿದ್ದೇವೆ. ಒಂದು ದೃಷ್ಟಿಯಿಂದ ನೋಡಿದರೆ ಬಹಳ ಹಿಂದಿನ ಕಾಲದಲ್ಲಿ ಕಟ್ಟಿದ ಕಟ್ಟಡಗಳು, ಸಾಧಿಸಿರತಕ್ಕ ಕಲಾ ಕೌಶಲ್ಯಗಳು, ರಚಿಸಿರತಕ್ಕ ಸಾಹಿತ್ಯ ಇವೇ ಮೊದಲಾದವು ಇಂದಿಗೂ ಉನ್ನತ ವರ್ಗಕ್ಕೆ ಸೇರಿದವುಗಳಾಗಿವೆ. ಏಕೆಂದರೆ ಇಂದಿನ ನಾಗರಿಕತೆಯು—ಸಂಸ್ಕೃತಿಯು ಆ ಸಾಂಸ್ಕೃತಿಕ ಸಂಪತ್ತನ್ನು ಅಸ್ಥಿಭಾರವನ್ನಾಗಿ ಮಾಡಿಕೊಂಡಿದೆ. ನಮ್ಮ ಇಂದಿನ ನಾಗರಿಕತೆಯು ಬಹಳ ಮಟ್ಟಿಗೆ ಅನುಕರಣದ ಮೇಲೆಯೇ ನಿಂತಿದೆ. ಪ್ರಾಚೀನ ಕಾಲಕ್ಕೆ ಸಂಬಂಧಪಟ್ಟ ಸಂಶೋಧನಗಳು ಇನ್ನೂ ನಡೆಯುತ್ತಲೇ ಇವೆ. ಇವುಗಳಲ್ಲಿ ಅಪೂರ್ವ ಕುಶಲತೆಯು ಕಾಣಬರುವದರಿಂದ ಚರಿತ್ರಕಾರರು ಈ ಭಾಗದಲ್ಲಿ ಆಸಕ್ತಿಯುಳ್ಳವರಾಗಿದ್ದಾರೆ. ಹೊಸ ವಿಷಯಗಳು ಗೊತ್ತಾದ ಹಾಗೆಲ್ಲ ಕಟ್ಟುಕಥೆಯ ಪ್ರಾಮುಖ್ಯತೆಯು ಕಡಿಮೆಯಾಗುತ್ತದೆ.

ಯುರೋಪದ ನಾಗರಿಕತೆಯಲ್ಲಿ ಗ್ರೀಕ ಮತ್ತು ರೋಮ ಜನರ ನಾಗರಿಕತೆಗಳು ಅತ್ಯಂತ ಶ್ರೇಷ್ಠವಾದವು; ಪ್ರಾಚೀನವಾದವು. ಗ್ರೀಕರ ನಾಟಕ, ರಾಜಕೀಯ ಪದ್ಧತಿ, ಕಲೆ ಇವುಗಳಲ್ಲಿ ಜೀವನದ ಸೊಬಗಿದೆ ಸೌಂದರ್ಯವಿದೆ. ರೋಮನರು ಗ್ರೀಕರ ಸಂಸ್ಕೃತಿಯನ್ನು ಯುರೋಪದಲ್ಲಿ ಪ್ರಚುರಪಡಿಸಿದರು. ರೋಮನರ ರಾಜ್ಯಶಾಸನವು ಯುರೋಪದ ಕೆಲವೆಡೆಗಳಲ್ಲಿ ಅನುಕರಣಮಾಡಲ್ಪಟ್ಟಿದೆ. ಗ್ರೀಕರಂತೆ ರೋಮನರೂ ಅದ್ಭುತವಾಗಿ ಕಲೆಯಲ್ಲಿ ಪ್ರವೀಣರಾಗಿದ್ದರು. ಯುರೋಪದ ನಾಗರಿಕತೆಯಲ್ಲಿ ಇವೆರಡು ದೇಶದವರು ಬೆಳೆಸಿದ ಸಂಸ್ಕೃತಿಯು ಸಮ್ಮಿಳಿತವಾಗಿದೆ.

ನಾಗರಿಕತೆಯೆಂಬ ಸುಗಂಧದ ಬಳ್ಳಿಯ ಸುಮನಗಳೇ ಸಂಸ್ಕೃತಿಯೆಂದು ಹೇಳಬಹುದು. ಸಂಸ್ಕೃತಿಯನ್ನು ಮೆಥ್ಯೂ ಆರ್ನಾಲ್ಡ್ ಎಂಬ

ಪ್ರಸಿದ್ಧ ಆಂಗ್ಲ ಕವಿಯು ಮತ್ತು ವಿಮರ್ಶಕನು ಮಾಧುರ್ಯ ಮತ್ತು ಹಳಕಿಗೆ ಹೋಲಿಸಿದ್ದಾನೆ. ಪ್ರಾಚೀನ ನಾಗರಿಕತೆಯ ಶ್ರೇಷ್ಠ ಅಂಶಗಳು ಹೇಗೆ ಇಂದಿಗೂ ನಮ್ಮ ನಾಗರಿಕತೆಗೆ ಮೂಲಾಧಾರಗಳಾಗಿವೆಯೋ ಅದರಂತೆಯೇ ನಾಗರಿಕತೆಯ ಬೆಳವಣಿಗೆಯನ್ನು ತಿಳಿಯಲು ಪ್ರಾಚೀನ ಜನಾಂಗಗಳ ಚರಿತ್ರೆಯ ಅರಿವು ಆವಶ್ಯಕವು. 'ಪೂರ್ವೇತಿ ಪೂರ್ವಃ', 'ಯದ್ಯದಾಚರತಿ ಶ್ರೇಷ್ಠಃ ತತ್ರ ದೇವೇತರೇ ಜನಾಃ' 'ಮಹಾಜನೋ ಏನ ಗತಸ್ಯ ಪಂಥಾಃ' ಎಂಬ ಉಕ್ತಿಗಳಂತೆ ಹಿಂದೆ ಚರಿತ್ರೆಯಲ್ಲಿ ಮಹಾ ವ್ಯಕ್ತಿಗಳು ನಡೆಸಿದ ಜೀವನದ ರೀತಿ; ಬೋಧಿಸಿದ ತತ್ವಗಳು ಇಂದಿಗೂ ಮಾರ್ಗದರ್ಶಕಗಳಾಗಿವೆ. ಅಲೆಗ್ಸಾಂಡರ್ ಪೋಪ ಕವಿಯ ವಚನದಂತೆ ಮನುಷ್ಯ ಜಾತಿಯ ಸರಿಯಾದ ಅಭ್ಯಾಸವು ಮನುಷ್ಯನ ಅಭ್ಯಾಸದಿಂದ ಗೊತ್ತಾಗುತ್ತದೆ

ನಮ್ಮ ದೇಶದ ನಾಗರಿಕತೆ ಮಾತ್ರವಲ್ಲದೆ ಇತರ ದೇಶಗಳ ನಾಗರಿಕತೆಯನ್ನು ತಿಳಿಯುವದರಿಂದ ಮನೋವೈಶಾಲ್ಯವೂ ಸಹನ ಶೀಲತೆಯೂ ಮತ್ತು ಒಗ್ಗಟ್ಟೂ ಸಾಧ್ಯವಾಗುವಲ್ಲಿ ಸಂದೇಹವಿಲ್ಲ. ಆದರೆ ಹಾಗೆ ತಿಳಿಯ ತಕ್ಕವರು ನಿಷ್ಪಕ್ಷಪಾತ ದೃಷ್ಟಿಯಿಂದ ಗುಣಾಂಶಗಳನ್ನು ಗ್ರಹಿಸುವವ-ರಾಗಿರಬೇಕು.

ಈ ಹಿಂದೆ ವಿಜ್ಞಾಪನೆ ಮಾಡಿಕೊಂಡಂತೆ ಈ ಪುಸ್ತಕದಲ್ಲಿ ನಾಗರಿಕತೆಗೆ ಸಂಬಂಧಪಟ್ಟವುಗಳೆಂದು ಭಾವಿಸಲ್ಪಟ್ಟರತಕ್ಕ ವಿವರಗಳನ್ನು ಸಂಕ್ಷೇಪವಾಗಿ ತಿಳಿಸಲೆತ್ನಿಸಿದ್ದಾಗಿದೆ. ಕಾಲ-ದೇಶಗಳನ್ನು ನಿರ್ಣಯ ಮಾಡತಕ್ಕ ಅಂಶಗಳು, ಶ್ರೇಷ್ಠತೆಯನ್ನು ಮತ್ತು ಪ್ರಾಚೀನತೆಯನ್ನು ನಿರ್ಧರಿಸತಕ್ಕ ವಿಷಯಗಳು, ಜನಾಂಗಗಳ ಮೂಲ ವಾಸಸ್ಥಾನ ಮತ್ತು ಅವುಗಳ ಸಂಚಾರ-ಭಾಷೆ-ಬರೆವಣಿಗೆ, ಲೋಹಗಳ ಉಪಯೋಗ, ರಾಜ್ಯಾಂಗ ವ್ಯವಸ್ಥೆ ಇವೇ ಮೊದಲಾದ ಸಾಂಸ್ಕೃತಿಕ ಬೆಳವಣಿಗೆಗಳು ಮತ್ತು ಇವುಗಳನ್ನು ಕಂಡು ಹಿಡಿದು ರೂಢಿಗೆ ತಂದವರು— ಈ ವಿಚಾರವನ್ನೂ

ಪೌರ್ವಾತ್ಯ ನಾಗರಿಕತೆಗೂ ಪಾಶ್ಚಾತ್ಯ ನಾಗರಿಕತೆಗೂ ಇರತಕ್ಕ ವ್ಯತ್ಯಾಸ ಗಳನ್ನೂ ಅಥವಾ ಅವುಗಳ ಸ್ಥಾನವನ್ನೂ ನಿರ್ಧರಿಸಲು ಇಲ್ಲಿ ಯತ್ನಿಸಿಲ್ಲ. ಏಕೆಂದರೆ ಈ ವಿಷಯಗಳು ಸುಪ್ರಸಿದ್ಧ ಪಂಡಿತರುಗಳ ಮುಂದಿರತಕ್ಕ ವಾದಗ್ರಸ್ತವಾದ ಅಥವಾ ತೊಡಕಾದ ಸಮಸ್ಯೆಗಳು. ಮೇಲ್ಕಂಡ ವಿಚಾರಗಳಲ್ಲಿ ಅವರ ಅಭಿಪ್ರಾಯಗಳು, ಭಿನ್ನಾಭಿಪ್ರಾಯಗಳು, ಮತ್ತು ಸಿದ್ಧಾಂತಗಳು, ಇವುಗಳನ್ನೇ ವಸ್ತುವಾಗಿ ತೆಗೆದುಕೊಂಡು ಪ್ರತ್ಯೇಕವಾಗಿ ಒಂದು ಪುಸ್ತಕವನ್ನು ಬರೆಯಬಹುದು. ಈ ಸಣ್ಣ ಪುಸ್ತಕವು ಏಷ್ಯಾ ಖಂಡದ ಪ್ರಾಚೀನ ನಾಗರಿಕತೆಯನ್ನು ತಿಳಿಯಲು ಒಂದು ಸಣ್ಣ ಕೈಪಿಡಿ ಯಾಗಬಹುದೆಂದು ಊಹಿಸಲಾಗಿದೆ. ಪಾಶ್ಚಾತ್ಯ ನಾಗರಿಕತೆಯು ವೈಶಾಲ್ಯತೆ ಯಿಂದಲೂ ವೈವಿಧ್ಯತೆಯಿಂದಲೂ ಕೂಡಿದೆ ಅದರ ಶ್ರೇಷ್ಠತೆಯನ್ನು ಯಾರೂ ಶಂಕಿಸುವಂತಿಲ್ಲ ಆದರೆ ಪೌರ್ವಾತ್ಯ ನಾಗರಿಕತೆಯೇ ಪ್ರಾಚೀನ ವಾದುದು; ಮತ್ತು ಮೂಲಭೂತವಾದುದು. ಆದಕಾರಣ ನಾಗರಿಕತೆಗಳ ಶ್ರೇಷ್ಠತೆಯನ್ನರಿತು ಅವಕ್ಕೆ ಸಂಬಂಧಪಟ್ಟ ಸಾಂಸ್ಕೃತಿಕ ವಸ್ತುಗಳನ್ನೂ ರಕ್ಷಿಸಿಕೊಳ್ಳಬೇಕಾದುದು ಅಗತ್ಯವು. ವಿಶ್ವದ ನಾಗರಿಕತೆಯನ್ನು ಅಭ್ಯಾಸ ಮಾಡಿದಲ್ಲಿ ಜನಾಂಗಗಳೆಲ್ಲವೂ ಒಗ್ಗಟ್ಟಿನಿಂದ ಸಹಕರಿಸಲು ಸಾಧ್ಯವಾಗು ತ್ತದೆ.

---

# ಪ ರಿ ಶಿ ಷ್ಟ

## ಪ್ರಾಚೀನ ನಾಗರಿಕತೆಯ ಕೇಂದ್ರಸ್ಥಾನಗಳಾಗಿದ್ದು ಅವಶೇಷಗಳು ದೊರೆತಿರುವ ಸ್ಥಾನನಿಶ್ಚಯ

**ಇರಾಕ**— ಯುಫ್ರೇಟಿಸ್ ಮತ್ತು ಟೈಗ್ರಿಸ್ ಎಂಬ ಯಮಳ ನದಿಗಳು ಈ ದೇಶದಲ್ಲಿ ಹರಿಯುತ್ತವೆ. ಇವುಗಳ ಮಧ್ಯ ಪ್ರದೇಶವೇ ಮೆಸೊಪೊಟೇಮಿಯಾ ದೇಶ. ಬ್ಯಾಬಿಲೋನಿಯಾ, ನಿನೇವ್ಹೆ, ಮೊಸಲ್, ಬಾಸ್ರಾ ಇವುಗಳು ಇರಾಕಿನಲ್ಲಿ ಅವ್ಯಕವಾಗಿವೆ.

**ಅಸ್ಸಿರಿಯಾ**— ಟೈಗ್ರಿಸ್‌ನದಿಯ ಪೂರ್ವಭಾಗದಲ್ಲಿ ನಿರ್ಮಿಸಲ್ಪಟ್ಟಿತ್ತು. ಬ್ಯಾಬಿಲೋನಿಯಾ ಮತ್ತು ಮೆಸೊಪೊಟೇಮಿಯಾಗಳನ್ನು ಒಳಗೊಂಡಿತ್ತು. ನಿನೇವ್ಹೆ—ಅಸ್ಸೀರಿಯಾ ರಾಜಧಾನಿ. ಬ್ಯಾಬಿಲೋನಿಯಾ ಮೀಡಿಯಾ ಮತ್ತು ಪರ್ಶಿಯಾ ಇವುಗಳ ಮೇಲೆ ಅಧಿಕಾರವಿತ್ತು.

**ಬ್ಯಾಬಿಲೋನಿಯಾ**— ಅಸ್ಸೀರಿಯಾಕ್ಕೆ ೫೦೦ ವರುಷಗಳ ವರೆಗೆ ಅಧೀನವಾಗಿ- ನಂತರ ಸ್ವತಂತ್ರವಾಗಿ ಪುನಃ ಆಶ್ರಿತ ಸ್ಥಾನವನ್ನು ಹೊಂದಿ— ಕಡೆಗೆ ಕ್ರಿ. ಪೂ. ೬೦೫ರ ಸುಮಾರಿನಲ್ಲಿ ದಾಸ್ಯವನ್ನು ಕಿತ್ತೊಗೆಯಿತು. ಯುಫ್ರೆಟಿಸ್ ನದಿಯ ಉಭಯ ಪಾರ್ಶ್ವದಲ್ಲೂ ಆವೃತವಾಗಿತ್ತು.

**ಫಿನಿಷಿಯಾ**— ಪ್ಯಾಲೆಸ್ಟೈನಿನ ಉತ್ತರಕ್ಕೂ ಮತ್ತು ದಕ್ಷಿಣಕ್ಕೂ ಇದ್ದ ಕಡಿದಾದ ಭೂಪ್ರದೇಶ-ಮೆಡಿಟರೇನಿಯನ್ ತೀರಪ್ರದೇಶ.

**ಇರಾನ್**— ಆಧುನಿಕ ಪರ್ಶಿಯಾದೇಶ.

**ಮೀಡಿಯಾ**— ಇರಾನಿನ ಪಶ್ಚಿಮಕ್ಕಿತ್ತು.

**ಬ್ಯಾಕ್ಟ್ರಿಯಾ**— ಇರಾನಿನ ಈಶಾನ್ಯಕ್ಕಿತ್ತು.

# ಆಧಾರ ಗ್ರಂಥಗಳು



1 H. G. WELLS—"The Outline of History"

2 Dr. LEONARD SCHMITAS— "A Manual of Ancient History"

3 Dr. WINTERNITZ— "Indian Literature" Chapter on the 'Age of Veda' pp. 29C—3C9.

4 MACDONALD— "History of Sanskrit Literature' Chapter VI, Chapter on 'RigVedic Age' Pages 139—170

5 P. GILES— "Cambridge History of India"— Vol. I Chapter III

6 Pandit JAWAHARLAL NEHRU—"Discovery of India"

7 SISIRAKUMAR MITRA— "Outposts of Indian Culture"—Article in 'Indian Review'—April 1947.

8 K. N. VASWANI— The Marvels of Mohenjo Daro—Article in "Modern Review"— January 1946.

9 J. M. DEB—"A great Political Book of Mourya Age" Article in 'The Kaisar--I--Hind'— Illustrated Weekly January 22, 1939.

10 FATHER HERAS—"Ancient History of India and the Epigraphical Data of Mohenjo Daro"—The Kaisar-I--Hind'—Illustrated Weekly, 13th March 1938.

11 Rao Bahadur K. V. RANGASWAMY IYENGAR— Lectures at the Jubilee Memorial Lectures delivered at Ernaculam " Political Ideals of the East "— as published in ' The Hindu ' 13th and 14th Feb. 1939.

12 Dr. BHANDARKAR— Series of Lectures on " Several Aspects of Ancient Indian Culture "— delivered under the Sir William Meyer Endowment Lectures.

13 Shrimati KAMALADEVI CHATOPADHYAY— " The Awakening of Asia "— ( Indian Express, 23rd March 1947 )

14 Dr. S. KRISHNASWAMY IYENGAR— " Mother Worship in Mohenjo Daro. "

15 T. N. RAMACHANDRAN—"The Golden Age of Hindu and Javanese Art "— published in ' Triveni '

# ಮಿಂಚಿನಬಳ್ಳಿಯ ಪ್ರಕಟನೆಗಳು

—:○:—

| | | | |
|---|---|---|---|
| ೨೨ | ಕನ್ನಡ ಸಂಸ್ಕೃತಿ* | | |
| ೨೩ | ಉಕ್ಕಿನ ಮನುಷ್ಯ* | | |
| ೨೪ | ಗಾಂಧೀವಾದ* | | |
| ೨೫ | ರಾಷ್ಟ್ರೀಯ ಪಂಚಾಯತಿ | .... | ೧-೦-೦ |
| ೨೬ | ವಿಚಾರ ಮಂಜರಿ | .... | ೨-೮-೦ |
| ೨೭ | ಜಾಗ್ರತ ಚೀನ | .... | ೨-೦-೦ |
| ೨೮ | ಪ್ರಬಂಧ ಪುಷ್ಪಾಂಜಲಿ | .... | ೧-೪-೦ |
| ೨೯-೩೦ | ರಾಷ್ಟ್ರಪತಿಗಳು | .... | ೪-೦-೦ |
| ೩೧ | ಪಾಕಿಸ್ತಾನದ ಹೂಲಿ | .... | ೨-೮-೦ |
| ೩೨ | ಕಂನಾಡ ಸಾಹಿತ್ಯಜ್ಞರ ಆತ್ಮಕಥನ | | ೨-೦-೦ |
| ೩೩ | ಗಾಂಧೀಜಿಯ ರಾಜಕೀಯ ಪತ್ರಗಳು | | ೨-೦-೦ |
| ೩೪ | ಸ್ವತಂತ್ರ ಭಾರತದ ರಾಜ್ಯಘಟನೆ | | ೧-೪-೦ |
| ೩೫ | ಬೆಳಕಿನ ಬಾಳು | .... | ೨-೮-೦ |
| ೩೬ | ಸೆರೆಮನೆಯಶೂರ | .... | ೨-೮-೦ |
| ೩೭-೩೮ | ಬಂಡಾಯದ ಇತಿಹಾಸ | .... | ೫-೦-೦ |
| ೩೯ | ಬುದ್ಧ-ಜಾತಕಗಳು | .... | ೭-೦-೦ |
| ೪೦ | ಏಶಿಯಾಖಂಡದ ಜನಾಂಗಗಳ ನಾಗರಿಕತೆಗಳು | | ೧-೪-೦ |

* ಈ ಗುರುತಿನ ಪುಸ್ತಕಗಳು ತೀರಿವೆ.

'ಮಿಂಚಿನಬಳ್ಳಿ' ಧಾರವಾಡ

# ಮಿಂಚಿನಬಳ್ಳಿಗೆ ಚಂದಾದಾರರಾಗಿರಿ

—— ✲ ——

— ಸಂಪಾದಕ —

## ಬುರ್ಲಿ ಬಿಂದುಮಾಧವ



ವರ್ಷದಲ್ಲಿ ೧೫೦ ಪುಟಗಳುಳ್ಳ

ನಾಲ್ಕು ಪುಸ್ತಕಗಳು

( ಒಟ್ಟಿಗೆ ೬೦೦ ಪುಟಗಳ ಸಾಹಿತ್ಯ )

ಮೂರು ತಿಂಗಳಿಗೊಂದರಂತೆ ಪ್ರಕಟವಾಗುವವು

✲

ವಾರ್ಷಿಕ ಚಂದಾ:—

| | |
|---|---|
| ಸ್ಥಳದವರಿಗೆ | ೫—೦—೦ |
| ಪರಸ್ಥಳದವರಿಗೆ | ೫—೮—೦ |
| ರಜಿಸ್ಟರ ಅಂಚೆಯಿಂದ | ೬—೮-೦ |

ಚಂದಾ ಹಣ ಮುಂಗಡ ಕಳಿಸಿ

ನಿಮ್ಮ ಪ್ರತಿಗಳಿಗಾಗಿ ಬರೆಯಿರಿ

ವ್ಯವಸ್ಥಾಪಕ: ಮಿಂಚಿನಬಳ್ಳಿ, ಧಾರವಾಡ